**DEPARTMENT OF PERSONNEL & ADMINISTRATIVE REFORMS**

**NO.DPAR 20 HHL 2005, Bangalore, dated :29th November 2005**

**NOTIFICATION – II**

Under the explanation of Section 25 of the Negotiable Instruments Act 1881 (Act No.XXVI of 1881) read with Notification No.20/25/26/Pub-1 dt.15.6.1957 of the Government of India Ministry of Home Affairs the following shall be Public Holidays throughout the State of Karnataka during the year 2006.

| Sl.No. | Date | Days | Public Holidays |
|---|---|---|---|
| 1 | 11.01.2006 | Wednesday | Bakrid |
| 2 | 14.01.2006 | Saturday | Utarayan Punnyakala Sankranthi |
| 3 | 26.01.2006 | Thursday | Republic day |
| 4 | 09.02.2006 | Thursday | Last day of Moharam |
| 5 | 30.03.2006 | Thursday | Chandramana Ugadi |
| 6 | 01.04.2006 | Saturday | Yearly closing of bank Accounts |
| 7 | 11.04.2006 | Tuesday | Mahaveera Jayanthi/Id-Milad |
| 8 | 14.04.2006 | Friday | Dr.Ambedkar Jayanthi/Good Friday |
| 9 | 01.05.2006 | Monday | May-day |
| 10 | 15.08.2006 | Tuesday | Independance day |
| 11 | 21.09.2006 | Thursday | Mahalaya Amavasya |
| 12 | 29.09.2006 | Friday | Half yearly Closing of Bank Accounts |
| 13 | 02.10.2006 | Monday | Mahatma Gandhi Jayanthi/ Vijaya Dashami |
| 14 | 20.10.2006 | Friday | Naraka Chathurdashi |
| 15 | 24.10.2006 | Tuesday | Khutab- E-Ramzan |
| 16 | 01.11.2006 | Wednesday | Kannada Rajyothsava |
| 17 | 25.12.2006 | Monday | Christmas |

1) These holidays are restricted to 17 days as per the directions of Banking Division, Government of India, and declared in consultation with the Regional Office of the Reserve Bank of India. Banks working on Sundays or any festival days which fall on Government holidays will seek clarification from their headquarters regarding appropriate alternate arrangements for those days.

2) Local Holidays are declared for Kodagu District only on account of Tula Sankramana 17.10.2006 (Monday) and Huthri festival on 18.11.2006 (Friday). Banks in Kodagu District will seek directions from Reserve Bank of India regarding the alternate days they should work in lieu of the two additional holidays sanctioned to them on the occasion of Tula Sankramana and Huttari Festival.

3) These holidays are declared for closing of Accounts of Commercial Banks and Co-operative Banks. The Reserve Bank of India will be functioning on these days. There is however no change in the day of closing of Accounts of Reserve Bank of India which continues to be 30th June and 31st December (However if these days are Sundays or General Holidays. The last working day of the month will be the day for Closing of Accounts).

By order and in the name of Governor of Karnataka,

P.R. 1910

**H.N.PRASAD**

Under Secretary to Government,

Dept. of Personnel & Administrative Reforms (State Protocol)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ-1**

**ಸಂಖ್ಯೆ : ಡಿಪಿಎಆರ್ 25 ಹೆಚ್‌ಹೆಚ್‌ಎಲ್ 2005, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005.**

ರಾಜ್ಯದಲ್ಲಿಯ ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ದಿನಾಂಕ: 19.12.2005 ಸೋಮವಾರದಂದು ಹಾಗೂ ದಿನಾಂಕ 23.12.2005 ರ ಶುಕ್ರವಾರದಂದು ಎರಡು ಹಂತಗಳಲ್ಲಿ ಚುನಾವಣೆಯು ನಡೆಯುವ ಪ್ರಯುಕ್ತ, ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಾಂತರ ಪ್ರದೇಶಗಳಲ್ಲಿಯ (ರಾಜ್ಯದಲ್ಲಿಯ ಎಲ್ಲಾ ಮಹಾನಗರ ಪಾಲಿಕೆಗಳು, ನಗರ ಸಭೆಗಳು, ಪುರ ಸಭೆಗಳು, ಅಧಿಸೂಚಿತ ಪ್ರದೇಶಗಳು (ನೋಟಿಫೈಡ್ ಏರಿಯಾಸ್), ನೈರ್ಮಲ್ಯ ಮಂಡಳಿಗಳು (ಸ್ಯಾನಿಟರಿ ಬೋರ್ಡ್) ಇವುಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳನ್ನು ಹೊರತುಪಡಿಸಿ) ಎಲ್ಲಾ ಸರ್ಕಾರಿ ಕಛೇರಿಗಳಿಗೂ ಅನುದಾನಿತ ಶಿಕ್ಷಣ

ಸಂಸ್ಥೆಗಳೂ ಸೇರಿದಂತೆ ಎಲ್ಲಾ ಶಾಲಾ ಕಾಲೇಜುಗಳಿಗೆ ಸಂಬಂಧಪಟ್ಟ ದಿನಗಳಂದು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ. ಇದು ಸರ್ಕಾರಿ ಸ್ವಾಮ್ಯದ ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಕೈಗಾರಿಕಾ ಸಂಸ್ಥೆಗಳಿಗೂ ಸಹ ಅನ್ವಯಿಸುತ್ತದೆ.

ಈ ರಜೆಯು ಅತ್ಯಾವಶ್ಯಕ ಸೇವೆಗಳಿಗೆ : ತುರ್ತು ಸೇವೆಗಳಿಗೆ ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎನ್. ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

**ಅನುಬಂಧ**

ದಿನಾಂಕ: 19.12.2005ರ ಸೋಮವಾರದಂದು ಮತದಾನ ನಡೆಯಲಿರುವ ಜಿಲ್ಲೆಗಳು

| | | | | | |
|---|---|---|---|---|---|
| 1 | ಚಾಮರಾಜನಗರ | 2 | ಬೆಳಗಾಂ | 3 | ಹಾವೇರಿ |
| 4 | ಕೊಡಗು | 5 | ಉಡುಪಿ | 6 | ಗದಗ |
| 7 | ಶಿವಮೊಗ್ಗ | 8 | ಹಾಸನ | 9 | ಧಾರವಾಡ |
| 10 | ದಕ್ಷಿಣ ಕನ್ನಡ | 11 | ಮೈಸೂರು | 12 | ಮಂಡ್ಯ |
| 13 | ಚಿಕ್ಕಮಗಳೂರು | 14 | ಉತ್ತರಕನ್ನಡ | | |

ದಿನಾಂಕ: 23.12.2005ರ ಶುಕ್ರವಾರದಂದು ಮತದಾನ ನಡೆಯಲಿರುವ ಜಿಲ್ಲೆಗಳು

| | | | | | |
|---|---|---|---|---|---|
| 1 | ಬೀದರ್ | 2 | ಬಿಜಾಪುರ | 3 | ಬಾಗಲಕೋಟೆ |
| 4 | ತುಮಕೂರು | 5 | ಬಳ್ಳಾರಿ | 6 | ರಾಯಚೂರು |
| 7 | ದಾವಣಗೆರೆ | 8 | ಚಿತ್ರದುರ್ಗ | 9 | ಬೆಂಗಳೂರು ಗ್ರಾಮಾಂತರ |
| 10 | ಗುಲ್ಬರ್ಗ | 11 | ಕೋಲಾರ | 12 | ಬೆಂಗಳೂರು ನಗರ |
| 13 | ಕೊಪ್ಪಳ | | | | |

**ಹೆಚ್.ಎನ್. ಪ್ರಸಾದ್**
ಪಿ.ಆರ್. 1911 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ-2

**ಸಂಖ್ಯೆ : ಡಿಪಿಎಆರ್ 25 ಹೆಚ್‌ಹೆಚ್‌ಎಲ್ 2005, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2005.**

ರಾಜ್ಯದಲ್ಲಿಯ ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ದಿನಾಂಕ: 19.12.2005 ಸೋಮವಾರದಂದು ಹಾಗೂ ದಿನಾಂಕ 23.12.2005 ರ ಶುಕ್ರವಾರದಂದು ಎರಡು ಹಂತಗಳಲ್ಲಿ ಸಾರ್ವತ್ರಿಕ ಚುನಾವಣೆಯು ನಡೆಯುವುದರಿಂದ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಾಂತರ ಪ್ರದೇಶಗಳಲ್ಲಿಯ (ರಾಜ್ಯದಲ್ಲಿಯ ಎಲ್ಲಾ ಮಹಾನಗರ ಪಾಲಿಕೆಗಳು, ನಗರ ಸಭೆಗಳು, ಪುರ ಸಭೆಗಳು, ಅಧಿಸೂಚಿತ ಪ್ರದೇಶಗಳು (ನೋಟಿಫೈಡ್ ಏರಿಯಾಸ್), ನೈರ್ಮಲ್ಯ ಮಂಡಳಿಗಳು (ಸ್ಯಾನಿಟರಿ ಬೋರ್ಡ್) ಇವುಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳನ್ನು ಹೊರತುಪಡಿಸಿ) ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ : 20-25-26 (ಪಿಯುಬಿ-1) ದಿನಾಂಕ: 15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ ಆ್ಯಕ್ಟ್ 1881 (1881 ರ ಅಧಿನಿಯಮ ಸಂಖ್ಯೆ : 26) ರ 25 ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎನ್. ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

**ಅನುಬಂಧ**

ದಿನಾಂಕ: 19.12.2005ರ ಸೋಮವಾರದಂದು ಮತದಾನ ನಡೆಯಲಿರುವ ಜಿಲ್ಲೆಗಳು

| | | | | | |
|---|---|---|---|---|---|
| 1 | ಚಾಮರಾಜನಗರ | 2 | ಬೆಳಗಾಂ | 3 | ಹಾವೇರಿ |
| 4 | ಕೊಡಗು | 5 | ಉಡುಪಿ | 6 | ಗದಗ |
| 7 | ಶಿವಮೊಗ್ಗ | 8 | ಹಾಸನ | 9 | ಧಾರವಾಡ |
| 10 | ದಕ್ಷಿಣ ಕನ್ನಡ | 11 | ಮೈಸೂರು | 12 | ಮಂಡ್ಯ |
| 13 | ಚಿಕ್ಕಮಗಳೂರು | 14 | ಉತ್ತರಕನ್ನಡ | | |

ದಿನಾಂಕ: 23.12.2005ರ ಶುಕ್ರವಾರದಂದು ಮತದಾನ ನಡೆಯಲಿರುವ ಜಿಲ್ಲೆಗಳು

| | | | | | |
|---|---|---|---|---|---|
| 1 | ಬೀದರ್ | 2 | ಬಿಜಾಪುರ | 3 | ಬಾಗಲಕೋಟೆ |
| 4 | ತುಮಕೂರು | 5 | ಬಳ್ಳಾರಿ | 6 | ರಾಯಚೂರು |
| 7 | ದಾವಣಗೆರೆ | 8 | ಚಿತ್ರದುರ್ಗ | 9 | ಬೆಂಗಳೂರು ಗ್ರಾಮಾಂತರ |
| 10 | ಗುಲ್ಬರ್ಗ | 11 | ಕೋಲಾರ | 12 | ಬೆಂಗಳೂರು ನಗರ |
| 13 | ಕೊಪ್ಪಳ | | | | |

**ಹೆಚ್.ಎನ್. ಪ್ರಸಾದ್**
ಪಿ.ಆರ್. 1912 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

**ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಉತ್ತರ ಕನ್ನಡ ಜಿಲ್ಲೆ.**

**ಸಂಖ್ಯೆ: ಇ2 / ಪ್ರಾಶಾಶಿ / ನೇಮಕ / 1 / 05-06 / 17936, ದಿನಾಂಕ: 26ನೇ ನವೆಂಬರ್ 2005.**

**ಪ್ರಕಟಣೆ**

2005-06 ನೇ ಸಾಲಿನ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿ ಸಹಿತ ಮಾಹಿತಿ ಪುಸ್ತಕ ಅಧ್ಯಾಯ-2ರ ಪುಟ ಸಂಖ್ಯೆ14ರ 6(1) (ಎ) (3) ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ".

6) ಪ್ರತಿ ಪ್ರವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ.

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

ವಿವರಣೆ : ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನಲನ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ.

**ಅಥವಾ**

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದುಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು
(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ,
ಉತ್ತರ ಕನ್ನಡ ಜಿಲ್ಲೆ.

ಪಿ.ಆರ್. 1913

**FORM NO. 155**

**(See Rule 329)**

**Members' Voluntary winding-up**

**Name of the Company : SREE VINAYAKA TRANSPORT COMPANY PRIVATE LIMITED**

**Notice convening the final meeting of contributories**

Notice is hereby given in pursuance of Section 497 of the Companies Act, 1956 that a General meeting (Final Meeting) of the members of the above Company will be held at the Registered Office of the Company situated at S.G.M.T. Co. Ltd. Building, P.B. No. 31, New B.H. Road, Sagar-577 401 on the 18th day of January, 2006 at 4.00 P.M. for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator be disposed off.

Dated this 15th day of December, 2005.

**P. SURESH NAYAK**
Liquidator.

P.D. 112

**FORM NO. 155**

**(See Rule 329)**

**Members' Voluntary winding-up**

**Name of the Company : SHIMOGA TRANSPORT COMPANY PRIVATE LIMITED**

**Notice convening the final meeting of contributories**

Notice is hereby given in pursuance of Section 497 of the Companies Act, 1956 that a General meeting (Final Meeting) of the members of the above Company will be held at the Registered Office of the Company situated at S.G.M.T. Co. Ltd. Building, Mandli, New Thirthahalli Road, Shimoga-577 201 on the 18th day of January, 2006 at 11.00 A.M. for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator be disposed off.

Dated this 15th day of December, 2005.

**P. SURESH NAYAK**
Liquidator.

P.D. 113

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ

**ನಂ: ಎಲ್.ಆರ್.ಎಫ್ (ಎನ್.) ಸಿ.ಆರ್ : 2/ 2005-2006, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2005.**

**ಅಧಿಕೃತ ಜ್ಞಾಪನ ಪತ್ರ**

**ವಿಷಯ:** ಶಬರಿ ಎಜುಕೇಷನ್ ಸೊಸೈಟಿ (ರಿ), ನಂ. 3392/7, 1ನೇ ಮೇನ್, ಟಿ.ಆರ್.ಎಸ್. ರಸ್ತೆ, ಗಾಯಿತ್ರಿ ನಗರ, ಬೆಂಗಳೂರು-21, ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಬಾಣಾವರ ಗ್ರಾಮದ ಸ.ನಂ. 103 ರಲ್ಲಿ 0-21 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶಬರಿ ಎಜುಕೇಷನ್ ಸೊಸೈಟಿ (ರಿ), ನಂ. 3392/7, 1ನೇ ಮೇನ್, ಟಿ.ಆರ್.ಎಸ್. ರಸ್ತೆ, ಗಾಯಿತ್ರಿ ನಗರ, ಬೆಂಗಳೂರು-21 ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಬಾಣಾವರ ಗ್ರಾಮದ ಸ.ನಂ. 103 ರಲ್ಲಿ 0-21 ಗುಂಟೆ ಜಮೀನನ್ನು ವಿದ್ಯಾಸಂಸ್ಥೆ ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ: ಎಲ್.ಆರ್.ಎಫ್ (1) ಸಿಆರ್: 60/05-06, ದಿನಾಂಕ: 1.12.2005 ರಲ್ಲಿ ಪ್ರಸ್ತಾಪಿತ ಚಿಕ್ಕಬಾಣಾವಾರ ಗ್ರಾಮದ ಸ.ನಂ. 103 ರಲ್ಲಿ 0-21 ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (i) (ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ : 4.5.2002 ರಂದು ನೊಂದಾಯಿಸಲ್ಪಟ್ಟಿದೆ ಖಾತೇದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರ ಪ್ರಕಾರ ವಿದ್ಯಾಸಂಸ್ಥೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚಿಕ್ಕಬಾಣಾವರ ಗ್ರಾಮದ ಸ.ನಂ. 103 ರಲ್ಲಿ 0-21 ಗುಂಟೆ ಜಮೀನನ್ನು ಶಬರಿ ಎಜುಕೇಷನ್ ಸೊಸೈಟಿ (ರಿ), ನಂ. 3392/7, 1ನೇ ಮೇನ್, ಟಿ.ಆರ್.ಎಸ್. ರಸ್ತೆ, ಗಾಯತ್ರಿ ನಗರ, ಬೆಂಗಳೂರು-21 ರವರಿಗೆ ವಿದ್ಯಾಸಂಸ್ಥೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (i) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ವಿದ್ಯಾಸಂಸ್ಥೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 1987

## PROCEEDINGS OF THE DISTRICT & SESSIONS COURT, GULBARGA

**(Competant Authority by under Rule 4 of Notaries Rules 1956)**

**Sub:** Appointment of Notaries for Chincholi Taluka regarding.

**Ref:** 1) Government of Karnataka Letter No. LAW 156 LQ 05, Dated: 26.7.2005 permitting to call for the applications from the Advocates who are aligible for the post of Notary.

2) District Court Gulbarga Notification No.3/05 dated: 22.8.2005.

3) Office Nots dated: 12.9.2005 and order passed thereon.

It is hereby brought to the notice of public that the following Advocates have submitted their memorial for appointment of Notary for Chincholi Taluka in Gulbarga District.

1. Sri Gowtam Nagendrappa
2. Sri Jaganath
3. Sri Gulgunji Manik
4. Sri Vasant Kumar
5. Sri/wise Surekha
6. Sri Chandra Rao
7. Sri Bheamshetty Patil

Therefore persons having any objactions for appointment of above Advocates as Notary for Chincholi Taluka May submit Their objection to the undersignad within 15 days from the date of publication of Notice in the official Gazette.

**B.A. HUCHANDI**

P.R. 1989 Dist. & Sessions Judge, Gulbarga.

## ತಹಶೀಲ್ದಾರ್‌ರವರ ಕಾರ್ಯಾಲಯ, ಮಾಗಡಿ ತಾಲ್ಲೂಕು, ಮಾಗಡಿ

**ಸಾರ್ವಜನಿಕ ಪ್ರಕಟಣೆ**

**ನಮೂನೆ-27**

**(ಭೂ ಕಂದಾಯ ಅಧಿನಿಯಮ 68(1) ನಿಯಮ-94)**

**ಸಂಖ್ಯೆ: ಎಲ್ಎನ್‌ಡಿ:ಸಿಆರ್:34/05-06, ದಿನಾಂಕ: 14ನೇ ಅಕ್ಟೋಬರ್ 2005**

**ಗ್ರಾಮ: ತಗಚಕುಪ್ಪೆ ಹೋಬಳಿ: ಕಸಬಾ ತಾಲ್ಲೂಕು: ಮಾಗಡಿ ಜಿಲ್ಲೆ: ಬೆಂ. ಗ್ರಾಮಾಂತರ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಅಧಿನಿಯಮ 68 (1) ನಿಯಮ 94 ರಂತೆ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನು ಸಾರ್ವಜನಿಕ ರಸ್ತೆಯಾಗಿದ್ದು, ಇದು ಸಾರ್ವಜನಿಕರ ಉಪಯೋಗಕ್ಕೆ ಯಾವುದೇ ರೀತಿಯಲ್ಲಿ ಉಪಯೋಗವಾಗುತ್ತಿರುವುದಿಲ್ಲವಾದ್ದರಿಂದ ಈ ಜಮೀನಿಗೆ ಇದ್ದ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ ಸದರಿ ಪ್ರದೇಶದಲ್ಲಿ ಸಾರ್ವಜನಿಕ ಉಪಯೋಗಕ್ಕೆ ಅಂದರೆ ಡಾ: ಬಿ.ಆರ್. ಅಂಬೇಡ್ಕರ್ ಭವನ ನಿರ್ಮಾಣ ಮಾಡುವ ಸಲುವಾಗಿ ಉದ್ದೇಶಿಸಲಾಗಿದ್ದು ಈ ಬಗ್ಗೆ ಸಾರ್ವಜನಿಕರಿಂದ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಈ ಕೆಳಗೆ ಸಹಿ ಮಾಡಿರುವವರಿಗೆ 90 ದಿನಗಳೊಳಗೆ ಲಿಖಿತ ಮೂಲಕ ಸಲ್ಲಿಸಲು ತಿಳಿಸಿದೆ.

ತಹಶೀಲ್ದಾರ್, ಮಾಗಡಿ ತಾಲ್ಲೂಕು, ಮಾಗಡಿ.

**ಷೆಡ್ಯೂಲ್ ಸ್ವತ್ತಿನ ವಿವರ**

| | | |
|---|---|---|
| 1) ಗ್ರಾಮ | : | ತಗಚಕುಪ್ಪೆ |
| 2) ತಾಲ್ಲೂಕು | : | ಮಾಗಡಿ |
| 3) ಜಿಲ್ಲೆ | : | ಬೆಂಗಳೂರು ಗ್ರಾಮಾಂತರ |
| 4) ಸ.ನಂ. | : | ಆಕಾರು ಕಂಡ ಖರಾಬು |
| 5) ವಿಸ್ತೀರ್ಣ | : | 0-13 ಗುಂಟೆ |
| 6) ಚಕ್ಕುಬಂದಿ | : | ಪೂರ್ವ: ಸ.ನಂ.19ರ ಜಮೀನು |
| | | ಪಶ್ಚಿಮ: ಸರ್ಕಾರಿ ತೊರೆ |
| | | ಉತ್ತರ: ಸ.ನಂ. 16ರ ಜಮೀನು |
| | | ದಕ್ಷಿಣ: ಸ.ನಂ. 19ರ ಜಮೀನು |

ಪಿ.ಆರ್. 1606 ತಹಶೀಲ್ದಾರ್, ಮಾಗಡಿ ತಾಲ್ಲೂಕು, ಮಾಗಡಿ.

## ಶಿಕ್ಷಣ ಇಲಾಖೆ

**ಅಧಿಸೂಚನೆ ಸಂಖ್ಯೆ: ಇಡಿ 142 ಇಎಸ್‌ಡಬ್ಲ್ಯೂ 2005, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2005**

ಶ್ರೀ ಬಿ. ನಾರಾಯಣರಾವ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ, ಇವರು ತಮ್ಮ ಅಧ್ಯಕ್ಷ ಸ್ಥಾನಕ್ಕೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 21.07.2005 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1609 **ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**HOME GUARDS AND CIVIL DEFENCE DEPARTMENT**

**Sub:** Nomination of officers in Home Guards and Civil Defence Department as required under The Right to Information Act 2005.

**NOTIFICATION NO. ADM(1)18/CGO/2001-02,DATED: 5th OCTOBER 2005**

In pursuance of Central Right to Information Act 2005 the following officers are nominated as Public Authority, Public Information Officer, Assistant Public Information Officer and Appellate Authority.

| Sl. No. | Public Authority | Public Information Officer | Assistant Public Information Officer | Appellate authority |
|---|---|---|---|---|
| | | **I. State Level** | | |
| 1 | Home Guards & Civil Defence Head Quarters Bangalore. | Deputy commandant General, Home Guards & Deputy Director, Civil Defence. | Assistant Administrative Officer, Home Guards and Civil Defence Headquarters. | I.G.P. & Addl. Commandant General Home Guards & Addl. Director Civil Defence. |
| 2 | Home Guards & Civil Defence Academy Bangalore | Commandant, Home Guards and Civil Defence Academy. | Deputy Commandant, Home Guards & Civil Defence Academy. | Deputy Commandant General, Home Guards & Deputy Director Civil Defence. |
| | | **II. District Level** | | |
| 1 | District Home Guards Office, Bangalore | Commandant, Home Guards, Bangalore District. | Deputy Commandant, Home Guards, Bangalore District | Deputy Commandant General Home Guards & Deputy Director Civil Defence. |
| 2 | District Home Guards Office, Bagalkote | Commandant, Home Guards, Bagalkote District. | Instructor, Home Guards, Bagalkote District | Deputy Commandant General Home Guards |
| 3 | District Home Guards Office, Belgaum | Commandant, Home Guards, Belgaum District. | Deputy Commandant, Home Guards, Belgaum District | Deputy Commandant General Home Guards |
| 4 | District Home Guards Office, Bellary | Commandant, Home Guards, Bellary District. | Deputy Commandant, Home Guards, Bellary District | Deputy Commandant General Home Guards |
| 5 | District Home Guards Office, Bidar | Commandant, Home Guards, Bidar District. | Deputy Commandant, Home Guards, Bidar District | Deputy Commandant General Home Guards |
| 6 | District Home Guards Office, Bijapur | Commandant, Home Guards, Bijapur District. | Deputy Commandant, Home Guards, Bijapur District | Deputy Commandant General Home Guards |
| 7 | District Home Guards Office, Chickmagalore | Commandant, Home Guards, Chickmagalore District. | Deputy Commandant, Home Guards, Chickmagalore District | Deputy Commandant General Home Guards |
| 8 | District Home Guards Office, Chamarajanagara | Commandant, Home Guards, Chamarajanagara District. | Instructor Home Guards, Chamarajanagara District | Deputy Commandant General Home Guards |
| 9 | District Home Guards Office, Chitradurga | Commandant, Home Guards, Chitradurga District. | Deputy Commandant, Home Guards, Chitradurga District | Deputy Commandant General Home Guards |
| 10 | District Home Guards Office, Dharwad | Commandant, Home Guards, Dharwad District. | Deputy Commandant, Home Guards, Dharwad District | Deputy Commandant General Home Guards |
| 11 | District Home Guards Office, Davanagere | Commandant, Home Guards, Davanagere District. | Instructor, Home Guards, Davanagere District | Deputy Commandant General Home Guards |

| Sl. No. | Public Authority | Public Information Officer | Assistant Public Information Officer | Appellate authority |
|---|---|---|---|---|
| 12 | District Home Guards Office, Dakshina Kannada (Mangalore) | Commandant, Home Guards, Dakshina Kannada District. | Deputy Commandant, Home Guards, Dakshina Kannada District | Deputy Commandant General Home Guards |
| 13 | District Home Guards Office, Gadag | Commandant, Home Guards, Gadag District. | Instructor, Home Guards, Gadag District | Deputy Commandant General Home Guards |
| 14 | District Home Guards Office, Gulbarga | Commandant, Home Guards, Gulbarga District. | Deputy Commandant, Home Guards, Gulbarga District | Deputy Commandant General Home Guards |
| 15 | District Home Guards Office, Hassan | Commandant, Home Guards, Hassan District. | Deputy Commandant, Home Guards, Hassan District | Deputy Commandant General Home Guards |
| 16 | District Home Guards Office, Haveri | Commandant, Home Guards, Haveri District. | Instructor, Home Guards, Haveri District | Deputy Commandant General Home Guards |
| 17 | District Home Guards Office, Kodagu (Madikeri) | Commandant, Home Guards, Kodagu District. | Deputy Commandant, Home Guards, Kodagu District | Deputy Commandant General Home Guards |
| 18 | District Home Guards Office, Kolar | Commandant, Home Guards, Kolar District. | Deputy Commandant, Home Guards, Kolar District | Deputy Commandant General Home Guards |
| 19 | District Home Guards Office, K.G.F. (Oorigaum) | Commandant, Home Guards, K.G.F. | Instructor, Home Guards, K.G.F. | Deputy Commandant General Home Guards |
| 20 | District Home Guards Office, Koppal | Commandant, Home Guards, Koppal District. | Instructor, Home Guards, Koppal District | Deputy Commandant General Home Guards |
| 21 | District Home Guards Office, Mandya | Commandant, Home Guards, Mandya District. | Deputy Commandant, Home Guards, Mandya District | Deputy Commandant General Home Guards |
| 22 | District Home Guards Office, Mysore | Commandant, Home Guards, Mysore District. | Deputy Commandant, Home Guards, Mysore District | Deputy Commandant General Home Guards |
| 23 | District Home Guards Office, Raichur | Commandant, Home Guards, Raichur District. | Deputy Commandant, Home Guards, Raichur District | Deputy Commandant General Home Guards |
| 24 | District Home Guards Office, Shimoga | Commandant, Home Guards, Shimoga District. | Deputy Commandant, Home Guards, Shimoga District | Deputy Commandant General Home Guards |
| 25 | District Home Guards Office, Tumkur | Commandant, Home Guards, Tumkur District. | Deputy Commandant, Home Guards, Tumkur District | Deputy Commandant General Home Guards |
| 26 | District Home Guards Office, Udupi | Commandant, Home Guards, Udupi District. | Instructor, Home Guards, Udupi District | Deputy Commandant General Home Guards |
| 27 | District Home Guards Office, Uttara Kannada (Karwar) | Commandant, Home Guards, Uttara Kannada District. | Deputy Commandant, Home Guards, Uttara Kannada District | Deputy Commandant General Home Guards |

DIRECTOR GENERAL OF POLICE AND
COMMANDANT GENERAL, HOME GUARDS AND
DIRECTOR, CIVIL DEFENCE.

P.R. 1611

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ವಿಷಯ :** ಶ್ರೀಮತಿ ಲಲಿತಾಬಾಯಿ, ದ್ವಿದಸ, ಭೂಸನಿ, ಕೋಲಾರ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮದ ಅಂತಿಮ ಆದೇಶ ಕುರಿತು.

**ಉಲ್ಲೇಖ :**
1) ಭೂಜಂನಿ, ಬೆಂಗಳೂರು ರವರ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.9:2002-03, ದಿನಾಂಕ: 20.2.2003 (ದೋಷಾರೋಪಣೆ ಪಟ್ಟಿಯೊಂದಿಗೆ)
2) ಭೂಜಂನಿ, ಬೆಂಗಳೂರು ರವರ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.9:2002-03, ದಿನಾಂಕ: 26.8.2003 ರಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿರುವುದು.
3) ಭೂಸನಿ, ಚಿಕ್ಕಬಳ್ಳಾಪುರ ಇವರ ಪತ್ರದ ಸಂಖ್ಯೆ: ಸಿಬ್ಬಂದಿ.ಶಿಸ್ತು.23:2003-04, ದಿನಾಂಕ: 28.10.2003 ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುವುದು.
4) ಭೂಜಂನಿ, ಬೆಂಗಳೂರು ರವರ ಎರಡನೇ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.9:2002-03, ದಿನಾಂಕ: 8.12.2003 (ವಿಚಾರಣಾ ವರದಿಯೊಂದಿಗೆ)
5) ಭೂಜಂನಿ, ಬೆಂಗಳೂರು ರವರ ಅಂತಿಮ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.9:2002-03, ದಿನಾಂಕ: 6.1.2004.
6) ಭೂಜಂನಿ, ಬೆಂಗಳೂರು ರವರ ಪತ್ರದ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.9:2002-03, ದಿನಾಂಕ: 5.7.2004.
7) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001, ದಿನಾಂಕ: 14.9.2001.

**ಪ್ರಸ್ತಾವನೆ:**

ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಲಲಿತಾಬಾಯಿ, ದ್ವಿತೀಯ ದರ್ಜೆ ಸಹಾಯಕರವರು ದಿನಾಂಕ: 5.1.2002 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಾದ ಬಗ್ಗೆ ಉಲ್ಲೇಖ (1) ರಲ್ಲಿ ಭೂದಾಖಲೆ ಜಂಟಿ ನಿರ್ದೇಶಕರು, ಬೆಂಗಳೂರು ಇವರು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-11ರ ಅನ್ವಯ ಕಾರಣ ಕೇಳಿ ನೋಟೀಸ್‌ನೊಂದಿಗೆ (ದೋಷಾರೋಪಣೆ ಪಟ್ಟಿಯೊಂದಿಗೆ) ದಿನಾಂಕ: 20.2.2003 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಇವರ ಮುಖಾಂತರ ಜಾರಿ ಮಾಡಲಾಗಿದೆ. ಇವರ ಮೇಲಿನ ಆರೋಪವನ್ನು ಈ ಕೆಳಗಿನಂತೆ ಪುನರುಚ್ಚರಿಸಿದೆ.

**ಆರೋಪ-1:**

"ಶ್ರೀಮತಿ ಲಲಿತಾಬಾಯಿ, ದ್ವಿತೀಯ ದರ್ಜೆ ಸಹಾಯಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಕಛೇರಿಯಲ್ಲಿ ದಿನಾಂಕ: 1.7.2000 ದಿಂದ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ: 5.1.2002 ರಂದು ಕಛೇರಿಗೆ ಗೈರು ಹಾಜರಾಗಿದ್ದು ದಿನಾಂಕ: 10.1.2002 ರಂದು ಅಂಚೆ ಮೂಲಕ ಖಾಸಗಿ ಕಾರಣದ ಮೇಲೆ ದಿನಾಂಕ: 7.1.2002 ರಿಂದ 11.1.2002 ರವರೆಗೆ 5 ದಿವಸ ಪರಿವರ್ತಿತ ರಜೆ ಕೋರಿ ಮನವಿಯನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಕಛೇರಿಗೆ ಕಳುಹಿಸಿದ್ದು ದಿನಾಂಕ: 12, 13 ಮತ್ತು 14.1.2002 ರಂದು ಸರ್ಕಾರಿ ರಜೆಗಳಾಗಿದ್ದು ದಿನಾಂಕ: 15.1.2002 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದು, ಕರ್ತವ್ಯಕ್ಕೆ ಹಾಜರಾಗದೇ ಗೈರು ಹಾಜರಾಗಿರುತ್ತೀರಿ. ಪುನಃ ದಿನಾಂಕ: 12.1.2002 ರಿಂದ 25.1.2002 ರವರೆಗೆ ವೈದ್ಯಕೀಯ ಕಾರಣ ನಮೂದಿಸಿ, ವೈದ್ಯಕೀಯ ಪ್ರಮಾಣಪತ್ರವನ್ನು ಸಲ್ಲಿಸದೇ ರಜೆ ಮಂಜೂರಿ ಬಗ್ಗೆ ಮನವಿಯನ್ನು ಅಂಚೆ ಮೂಲಕ ಕಳುಹಿಸಿರುತ್ತೀರಿ. ನಂತರ ಯಾವ ರಜೆ ಅರ್ಜಿಯನ್ನು ಸಲ್ಲಿಸದೇ ಇದುವರೆವಿಗೂ ಅನಧಿಕೃತ ಗೈರು ಹಾಜರಾಗಿರುತ್ತೀರಿ. ಇದರಿಂದ ಸರ್ಕಾರಿ ಕೆಲಸಕ್ಕೆ ಹಾಗೂ ಸಾರ್ವಜನಿಕ ಕೆಲಸಕ್ಕೆ ತೊಂದರೆಯಾಗಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ-3(i) (ii) ಮತ್ತು (iii) ನ್ನು ಉಲ್ಲಂಘಿಸಿ ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, 120 ದಿವಸಗಳಿಗಿಂತಲೂ ಹೆಚ್ಚಿನ ಅವಧಿಗೆ ಅನಧಿಕೃತ ಗೈರು ಹಾಜರಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 108 ರನ್ವಯ ಕೆಲಸದಿಂದ ವಜಾ ಮಾಡಲು ಅನುವು ಮಾಡಿಕೊಟ್ಟಿರುವುದರಿಂದ ಈ ಆರೋಪ."

ನೌಕರರು ದಿನಾಂಕ: 26.2.2003 ರಂದು ದೋಷಾರೋಪಣೆಯನ್ನು ಸ್ವೀಕರಿಸಿ, ಪ್ರತಿರಕ್ಷಣಾ ಹೇಳಿಕೆಯನ್ನು ನಿಗದಿಪಡಿಸಿದ ಮತ್ತು ನಂತರದ ಅವಧಿಯಲ್ಲಿ ಸಲ್ಲಿಸಿರುವುದಿಲ್ಲ. ಆದ ಕಾರಣ ಉಲ್ಲೇಖ (2)ರ ದಿನಾಂಕ: 26.8.2003ರ ಭೂದಾಖಲೆಗಳ ಜಂಟಿ ನಿರ್ದೇಶಕರ ನಡವಳಿಯಲ್ಲಿ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿಕ್ಕಬಳ್ಳಾಪುರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿದ್ದು, ಉಲ್ಲೇಖ (3)ರ ದಿನಾಂಕ: 28.10.2003 ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ನೌಕರರು ದಿನಾಂಕ: 16.10.2003 ರಂದು ವಿಚಾರಣಾಧಿಕಾರಿಗಳ ಮುಂದೆ ವಿಚಾರಣೆಗೆ ಹಾಜರಾಗಿ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಆರೋಪವನ್ನು ಯಾವುದೇ ಷರತ್ತಿಲ್ಲದೆ ಒಪ್ಪಿಕೊಂಡು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (4)ರ ದಿನಾಂಕ: 8.12.2003 ರಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ಎರಡನೇ ಕಾರಣ ಕೇಳಿ ನೋಟೀಸಿನೊಂದಿಗೆ ಕಳುಹಿಸಿಕೊಡಲಾಗಿರುವ ವಿಚಾರಣಾ ವರದಿಯ ಪ್ರತಿಯನ್ನು ದಿನಾಂಕ: 16.12.2003 ರಂದು ಸ್ವೀಕರಿಸಿ ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸದ ಕಾರಣ ಉಲ್ಲೇಖ (5)ರ ಪ್ರಕಾರ ಅಂತಿಮ ಕಾರಣ ಕೇಳಿ ನೋಟೀಸನ್ನು ಸಹ ನೀಡಲಾಗಿದ್ದು, ಇದಕ್ಕೆ ಸಹ ಪ್ರತಿಕ್ರಿಯಿಸಿರುವುದಿಲ್ಲ.

ಉಲ್ಲೇಖ (7) ರಲ್ಲಿ ನಮೂದಿಸಿರುವ ಸರ್ಕಾರದ ಸುತ್ತೋಲೆಯನ್ವಯ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ(ಎಂ.1)ಶಿಸ್ತು.50:2003-04, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಲಲಿತಾಬಾಯಿ, ದ್ವಿತೀಯ ದರ್ಜೆ ಸಹಾಯಕರವರು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿ ಅನಧಿಕೃತ ಗೈರು ಹಾಜರಿ ಆರೋಪವನ್ನು ಯಾವುದೇ ಷರತ್ತಿಲ್ಲದೆ ಒಪ್ಪಿಕೊಂಡಿರುತ್ತಾರೆಂಬ ಅಂಶವನ್ನು ವಿಚಾರಣಾ ವರದಿಯಲ್ಲಿ ಪರಿಶೀಲಿಸಿದೆ. ದಿನಾಂಕ: 5.1.2002 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರು ಹಾಜರಾಗಿರುವ ಆರೋಪವು ಸಾಬೀತಾಗಿರುತ್ತದೆ. ದಿನಾಂಕ: 5.1.2002 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಅದರಿಂದ ಸಾರ್ವಜನಿಕ ಕೆಲಸಕ್ಕೆ ಅನಾನುಕೂಲವಾಗಲು ಕಾರಣರಾಗಿರುತ್ತಾರೆ. ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ ಸರ್ಕಾರಿ ಕೆಲಸಕ್ಕೆ ದೀರ್ಘಕಾಲದವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಗಂಭೀರವಾದ ಕರ್ತವ್ಯಲೋಪ ಹಾಗೂ ದುರ್ವರ್ತನೆಯಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮ 108 ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001, ದಿನಾಂಕ: 14.9.2001 ರನ್ವಯ 4 ತಿಂಗಳುಗಳಿಗಿಂತಲೂ ಹೆಚ್ಚು ಅವಧಿಗೆ ಅನಧಿಕೃತ ಗೈರು ಹಾಜರಾಗಿದ್ದಲ್ಲಿ ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಈ ಪ್ರಕರಣದಲ್ಲಿ ಆರೋಪಿತ ನೌಕರರು ಸರ್ಕಾರಿ ಕೆಲಸಕ್ಕೆ ಹಾಜರಾಗದೆ ದಿನಾಂಕ: 5.1.2002 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುವುದು ತೀವ್ರ ತೆರನಾದ ದುರ್ವರ್ತನೆ ಆಗಿರುವುದರಿಂದ ಅವರ ವಿರುದ್ಧ ಮಾಡಲಾಗಿರುವ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಆರೋಪಿತ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ತೀರ್ಮಾನಿಸಿರುತ್ತೇನೆ.

ಅದರಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-8 (viii) ರೊಂದಿಗೆ ಓದಿಕೊಂಡ ನಿಯಮ 9(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜಿ.ವಿ. ರಾಮಚಂದ್ರ, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀಮತಿ ಲಲಿತಾಬಾಯಿ, ದ್ವಿತೀಯ ದರ್ಜೆ ಸಹಾಯಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಕಛೇರಿ ಇವರನ್ನು ಸೇವೆಯಿಂದ "ವಜಾ ಮಾಡಿ ಆದೇಶಿಸಿದ್ದೇನೆ".

ಆಯುಕ್ತರು,

ಪಿ.ಆರ್. 1612 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ರವರ ನಡವಳಿಗಳು

**ವಿಷಯ :** ಕೋಲಾರ ಜಿಲ್ಲೆ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ವಿಟ್ಟಪ್ಪನಹಳ್ಳಿ ಮತ್ತು ಯಾನಾದಹಳ್ಳಿ ಗ್ರಾಮಗಳ ಹಲವಾರು ಸ.ನಂ.ಗಳಲ್ಲಿ ಒಟ್ಟಾರೆ 3 ಎಕರೆ 26 ಗುಂಟೆ ಜಮೀನನ್ನು ನಬಾರ್ಡ್ ಯೋಜನೆಯಡಿ ರಸ್ತೆ ನಿರ್ಮಾಣ ಮಾಡುವ ಬಗ್ಗೆ ಹಾಗೂ ರಸ್ತೆ ಅಭಿವೃದ್ಧಿಗಾಗಿ ಭೂ ಸ್ವಾಧೀನ.

**ಉಲ್ಲೇಖ :** 1) ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ ಕೋಲಾರ ವಿಭಾಗ ರವರ ಪತ್ರ ನಂಕಾಪಾಇಂ ಲೋ ಕೋಲಾರ ಭೂ ಮಾಪಕರು ಭೂ ಸ್ವಾಧೀನ 12/2004-05, ದಿನಾಂಕ: 15.7.2004.

2) ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ಕೋಲಾರ ರವರ ವರದಿ ನಂ. ಎಲ್ಎಕ್ಯೂ.ಎಸ್ಆರ್ 9/ 2004-05, ದಿನಾಂಕ: 14.09.2005.

**ಪ್ರಸ್ತಾವನೆ:**

ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ ಕೋಲಾರ ವಿಭಾಗ ರವರು ಉಲ್ಲೇಖ (1)ರ ಪತ್ರದ ಅನ್ವಯ ಪ್ರಸ್ತಾವನೆಯನ್ನು ಸಲ್ಲಿಸಿ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ವಿಟ್ಟಪ್ಪನಹಳ್ಳಿ ಗ್ರಾಮದ ಸ.ನಂ.61 ಹಾಗೂ ಇತರೆ ಹಲವಾರು ಸ.ನಂ. ಗಳಲ್ಲಿ ಒಟ್ಟಾರೆ 3 ಎಕರೆ 09 ಗುಂಟೆ ಹಾಗೂ ಯಾನಾದಹಳ್ಳಿ ಗ್ರಾಮದ ಸ.ನಂ.77/3 ಹಾಗೂ ಇತರೆ ಹಲವಾರು ಸ.ನಂ.ಗಳಲ್ಲಿ 26 ಗುಂಟೆ ಒಟ್ಟಾರೆ 3 ಎಕರೆ 35 ಗುಂಟೆ ಜಮೀನನ್ನು ನಬಾರ್ಡ್ ಯೋಜನೆಯಡಿಯಲ್ಲಿ ರಸ್ತೆ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ಕೋರಿದ್ದರ ಮೇರೆಗೆ ಈ ಬಗ್ಗೆ ಪರಿಶೀಲಿಸಿ ಕಡತದೊಟ್ಟಿಗೆ ವರದಿ ಹಾಗೂ 4(1)ರ ಪ್ರಾರಂಭಿಕ ಕರಡು ಅಧಿಸೂಚನೆಯನ್ನು ಅನುಮೋದನೆಗಾಗಿ ಸಲ್ಲಿಸಲು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರಿಗೆ ನಿರ್ದೇಶನ ನೀಡಿದ್ದರ ಮೇರೆಗೆ ಸದರಿಯವರು ಉಲ್ಲೇಖ (2)ರ ಅನ್ವಯ ಕಡತದೊಟ್ಟಿಗೆ ವರದಿ ಹಾಗೂ ಪ್ರಾರಂಭಿಕ ಅಧಿಸೂಚನೆಯನ್ನು ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. ಭೂ ಸ್ವಾಧೀನಕ್ಕೆ ಒಳಪಡಿಸಲಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ವಿಟ್ಟಪ್ಪನಹಳ್ಳಿ ಮತ್ತು ಯಾನಾದಹಳ್ಳಿ ಗ್ರಾಮಗಳ ರಸ್ತೆಯನ್ನು ನಬಾರ್ಡ್ ಯೋಜನೆಯಡಿ ರಸ್ತೆ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ಲೋಕೋಪಯೋಗಿ ಇಲಾಖೆಯವರಿಗೆ ಅಗತ್ಯವಿರುವುದು ಕಂಡು ಬಂದಿರುತ್ತದೆಂದೂ ಭೂ ಕೋರಿಕೆ ಇಲಾಖೆಯವರು ಭೂ ಸ್ವಾಧೀನದ ಅಂದಾಜು ವೆಚ್ಚವಾಗಿ ರೂ.532676/- (ರೂಪಾಯಿ ಐದು ಲಕ್ಷದ ಮೂವತ್ತೆರಡು ಸಾವಿರದ ಆರುನೂರ ಎಪ್ಪತ್ತಾರು ಮಾತ್ರ) ವನ್ನು ಸಹಾಯಕ ಕಮೀಷನರ್ ರವರ ಹೆಸರಿನಲ್ಲಿ ಠೇವಣಿ ಇಟ್ಟಿರುತ್ತಾರೆಂದೂ ಈ ಭೂ ಸ್ವಾಧೀನದ ಅವಶ್ಯಕತೆ ಇದೆಯೆಂದು ವರದಿ ಮಾಡುತ್ತಾ ಯಾನಾದಹಳ್ಳಿ ಗ್ರಾಮದ ಸ.ನಂ.79ರ 0-09 ಗುಂಟೆ ಜಮೀನು ಸ್ಮಶಾನವಾಗಿರುವುದರಿಂದ ಭೂ ಸ್ವಾಧೀನದಿಂದ ಕೈಬಿಡಲಾಗಿದೆಯೆಂದು ವರದಿ ಮಾಡಿರುವುದರ ಮೇರೆಗೆ ಈ ಆದೇಶ.

### ಆದೇಶ ಸಂಖ್ಯೆ: ಎಲ್ಎಕ್ಯೂ.ಎಸ್ಆರ್ 12/2004-05, ದಿನಾಂಕ: 30ನೇ ಸೆಪ್ಟೆಂಬರ್ 2005

ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ವಿಟ್ಟಪ್ಪನಹಳ್ಳಿ ಹಾಗೂ ಯನಾದಹಳ್ಳಿ ಗ್ರಾಮಗಳಲ್ಲಿ ರಸ್ತೆ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ವಿಟ್ಟಪ್ಪನಹಳ್ಳಿ ಗ್ರಾಮದ ಸ.ನಂ.61 ಹಾಗೂ ಇತರೆ ಹಲವಾರು ಸ.ನಂ.ಗಳಲ್ಲಿ ಒಟ್ಟಾರೆ 3 ಎಕರೆ 09 ಗುಂಟೆ ಮತ್ತು ಯಾನಾದಹಳ್ಳಿ ಗ್ರಾಮದ ಸ.ನಂ.77/3 ಹಾಗೂ ಇತರೆ ಹಲವಾರು ಸ.ನಂ.ಗಳಲ್ಲಿ ಒಟ್ಟಾರೆ 0-17 ಗುಂಟೆ ಜಮೀನು ಒಟ್ಟಾರೆ 3 ಎಕರೆ 26 ಗುಂಟೆ ಜಮೀನು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಯಾನಾದಹಳ್ಳಿ ಮತ್ತು ವಿಟ್ಟಪ್ಪನಹಳ್ಳಿ ಗ್ರಾಮಗಳಲ್ಲಿ ರಸ್ತೆ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ಅವಶ್ಯಕತೆ ಇರುವುದು ಕಂಡು ಬಂದಿರುವುದರಿಂದ ಹಾಗೂ ಭೂ ಕೋರಿಕೆ ಇಲಾಖೆಯವರು ಭೂ ಸ್ವಾಧೀನದ ಅಂದಾಜು ವೆಚ್ಚವನ್ನು ಠೇವಣಿಯಾಗಿ ಇಟ್ಟಿರುವುದರಿಂದ ಭೂ ಸ್ವಾಧೀನ ಕಾಯ್ದೆ 1894ರ ಕಲಂ 4(1)ರ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರೆಗೆ ಕಳುಹಿಸಲು ಆದೇಶಿಸಿದೆ. ಈ ಅಧಿಸೂಚನೆಯನ್ನು ನಿಯಮಾನುಸಾರ ದಿನ ಪತ್ರಿಕೆಗಳಲ್ಲಿ ಹಾಗೂ ಸ್ಥಳೀಯವಾಗಿ ಪ್ರಕಟಿಸಲು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರಿಗೆ ನಿರ್ದೇಶಿಸಿದೆ.

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಭೂ ಆರ್ಜನೆ ಅಧಿನಿಯಮ 4(1) ಪ್ರಕರಣದ ಮೇರೆಗೆ ಅಧಿಸೂಚನೆ

### ಕ್ರಮಾಂಕ: ಎಲ್ಎಕ್ಯೂ.ಎಸ್ಆರ್ 16/2004-05, ದಿನಾಂಕ: 30ನೇ ಸೆಪ್ಟೆಂಬರ್ 2005

ಇದರ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ, ವಿಟ್ಟಪ್ಪನಹಳ್ಳಿ ಮತ್ತು ಯಾನಾದಿಹಳ್ಳಿ ಗ್ರಾಮಗಳ ರಸ್ತೆಯನ್ನು ನಬಾರ್ಡು ಯೋಜನೆಯಡಿ ರಸ್ತೆ ನಿರ್ಮಾಣ ಮತ್ತು ಅಭಿವೃದ್ಧಿಯ ಉದ್ದೇಶಕ್ಕಾಗಿ ಲೋಕೋಪಯೋಗಿ ಇಲಾಖೆಗೆ ಅಗತ್ಯವಾಗಲಿವೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ:

ಕರ್ನಾಟಕ ಅಧಿನಿಯಮದ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ: 1894ರ 1)ರ 4ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸು ಕೊಡಲಾಗಿದೆ. ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ ಕಲಂ 4(2)ನೆಯ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಸಹಾಯಕ ಕಮೀಷನರ್ ಹಾಗೂ ಭೂ ಸ್ವಾಧೀನಾಧಿಕಾರಿಗಳು, ಕೋಲಾರ ಉಪವಿಭಾಗ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಸಹಾಯಕ ಕಮೀಷನರ್ ಮತ್ತು ಭೂ ಸ್ವಾಧೀನಾಧಿಕಾರಿಗಳು, ಕೋಲಾರ ಉಪ ವಿಭಾಗ, ಕೋಲಾರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಈ ಅಧಿಸೂಚನೆ ಪ್ರಕಟವಾದ ಮೂವ್ವತ್ತು ದಿನಗಳೊಳಗಾಗಿ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಸಹಾಯಕ ಕಮೀಷನರ್ ಮತ್ತು ಭೂ ಸ್ವಾಧೀನಾಧಿಕಾರಿಗಳು, ಕೋಲಾರ ಉಪ ವಿಭಾಗ, ಕೋಲಾರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಆರ್ಜನೆ ಉದ್ದೇಶಕ್ಕಾಗಿ ಸದರಿ ಜಮೀನುಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಬೇರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಆರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯೂ ಸದರಿ ಅಧಿನಿಯಮದ (ಏಳನೇ ಖಂಡದ) 24ನೇ ಪ್ರಕರಣದ ಮೇರೆಗಿನ ಗಣನೆಗೆ ತೆಗೆದುಕೊಳ್ಳಬಾರದು.

ಉಪ ವಿಭಾಗಾಧಿಕಾರಿಗಳು ಮತ್ತು ಭೂ ಸ್ವಾಧೀನಾಧಿಕಾರಿ, ಕೋಲಾರ ಉಪ ವಿಭಾಗ, ಕೋಲಾರ ರವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

ಜಿಲ್ಲೆ: ಕೋಲಾರ ತಾಲ್ಲೂಕು: ಕೋಲಾರ ಹೋಬಳಿ: ಹುತ್ತೂರು ಗ್ರಾಮಗಳು: 1. ವಿಟ್ಟಪ್ಪನಹಳ್ಳಿ 2. ಯಾನಾದಿಹಳ್ಳಿ

| ಕ್ರ. ಸಂ. | ಖಾತೆದಾರರ / ಅನುಭವದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ಸ.ನಂ. | ತರಹೆ | ಬೇಕಾಗಿರುವ ಜಮೀನಿನ | |
|---|---|---|---|---|---|
| | | | | ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
| 1 | 2 | 3 | 4 | 5 | 6 |
| | **1. ವಿಟ್ಟಪ್ಪನಹಳ್ಳಿ** | | | | |
| 1 | ವಿ. ವೆಂಕಟರಾಮಯ್ಯ ಬಿನ್ ಮುನಿಯಪ್ಪ | 61 | ಖುಷ್ಕಿ | 0-04<br>0-04 RPK<br>0-08 | 0-14 |
| 2 | ಜಯಮ್ಮ ಕೋಂ ಜಿ.ಎಂ. ಕೃಷ್ಣಪ್ಪ | 66/2 | ಖುಷ್ಕಿ | 0-02<br>0-02 RPK<br>0-04 | 0-08 |
| 3 | ಅಪ್ಪಯ್ಯ ಉರುಫ್ ಮುನಿಶಾಮಿ ಬಿನ್ ದಾಸಪ್ಪ | 80/5 | ಖುಷ್ಕಿ | 0-0 1/2 | 0-02 |
| 4 | 1. ವಿ. ವೆಂಕಟರಾಮಯ್ಯ ಬಿನ್ ಮುನಿಶಾಮಿ<br>2. ಬಿ. ದ್ಯಾವಪ್ಪ ಬಿನ್ ಬೈರಪ್ಪ | 80/6 | ಖುಷ್ಕಿ | 0-03<br>0-02 RPK<br>0-05 | 0-15 |
| 5 | 1. ಟಿ. ಹನುಮಪ್ಪ<br>2. ಬೈಯಮ್ಮ ಕೋಂ ಲೇಟ್ ಮುನಿವೆಂಕಟಪ್ಪ | 83/3 | ಖುಷ್ಕಿ | 0-0 1/4 | 0-03 |
| 6 | ಎಂ. ನಾರಾಯಣಪ್ಪ | 83/4 | ಖುಷ್ಕಿ | 0-02 | 0-26 |
| 7 | 1. ಶ್ರೀನಿವಾಸ<br>2. ಮುನೇಗೌಡ<br>3. ಎನ್. ಸುಬ್ರಮಣಿ<br>4. ಎನ್. ರಾಮಚಂದ್ರ<br>5. ನಾರಾಯಣಸ್ವಾಮಿ | 83/5 | ಖುಷ್ಕಿ | 0-0 1/4 | 0-04 |

| 1 | 2 | 3 | 4 | 5 | 6 |
|---|---|---|---|---|---|
| 8 | 1. ಮುನಿವೆಂಕಟಪ್ಪ<br>2. ಕುರುಟು ಹನುಮಪ್ಪ | 84 | ಖುಷ್ಕಿ | 0-00 1/2<br>0-01 rpk<br>0-01 1/2 | 0-04 |
| 9 | 1. ವಿ.ಎಂ. ವೆಂಕಟೇಶಪ್ಪ ಬಿನ್ ಮುನಿಯಪ್ಪ<br>2. ಪಿ.ಎಲ್.ಡಿ. ಬ್ಯಾಂಕ್‌ಗೆ ಆಧಾರ | 85 | ಖುಷ್ಕಿ | 0-01 1/2<br>0-01 rpk<br>0-02 1/2 | 0-11 |
| 10 | 1. ಎಸ್. ಚಂದ್ರಪ್ಪ ಬಿನ್ ಚಿಕ್ಕಪ್ಪಯ್ಯ<br>2. ಎಸ್.ವಿ. ಚಂದ್ರೇಗೌಡ ಬಿನ್ ಸುಬ್ಬಣ್ಣ | 86/1 | ಖುಷ್ಕಿ | 0-04<br>0-03 rpk<br>0-07 | 0-19 |
| 11 | 1. ಕು. ತಿಪ್ಪಣ್ಣ<br>2. ಲಕ್ಷ್ಮಕ್ಕ<br>3. ಎಂ.ವಿ. ಚಂದ್ರೇಗೌಡ ಬಿನ್ ಸುಬ್ಬಣ್ಣ | 86/2 | ಖುಷ್ಕಿ | 0-01<br>0-01 rpk<br>0-02 | 0-07 |
| 12 | 1. ವೆಂಕಟೇಶಪ್ಪ ಬಿನ್ ಗೂಳಪ್ಪ<br>2. ಲಕ್ಷ್ಮಕ್ಕ<br>3. ಚಂದ್ರೇಗೌಡ ಬಿನ್ ಸುಬ್ಬಣ್ಣ<br>4. ಬೈಯಮ್ಮ | 88/1 | ಖುಷ್ಕಿ | 0-02<br>0-01 rpk<br>0-03 | 0-09 |
| 13 | 1. ದೋಬಿ ವೆಂಕಟೇಶಪ್ಪ ಬಿನ್ ಗೋಪಾಲಪ್ಪ<br>2. ಬೈಯಮ್ಮ<br>3. ಲಕ್ಷ್ಮಕ್ಕ<br>4. ಎಸ್.ವಿ. ಚಂದ್ರೇಗೌಡ ಬಿನ್ ಸುಬ್ಬಣ್ಣ | 88/2 | ಖುಷ್ಕಿ | 0-02<br>0-01 rpk<br>0-03 | 0-09 |
| 14 | 1. ರಾಮಪ್ಪ ಬಿನ್ ವೆಂಕಟೇಶಪ್ಪ<br>2. ನಾರಾಯಣಪ್ಪ<br>3. ಗೋವಿಂದಪ್ಪ | 88/3 | ಖುಷ್ಕಿ | 0-03<br>0-03 rpk<br>0-06 | 0-13 |
| 15 | ದ್ಯಾವಪ್ಪ ಬಿನ್ ಬೈರಪ್ಪ | 88/4 | ಖುಷ್ಕಿ | 0-02<br>0-02 rpk<br>0-04 | 0-06 |
| 16 | 1. ಮುನಿಯಮ್ಮ<br>2. ಮುನಿರಾಜು ಬಿನ್ ವೆಂಕಟೇಶಪ್ಪ<br>3. ಹೆಚ್. ವೆಂಕಟರಾಮಯ್ಯ ಬಿನ್ ಲೇಟ್ ಹನುಮಪ್ಪ<br>4. ಪಾಪಯ್ಯ<br>5. ನಾರಾಯಣ ಬಿನ್ ಲೇಟ್ ವೆಂಕಟರಾಮಪ್ಪ | 90 | ಖುಷ್ಕಿ | 0-09<br>0-07 rpk<br>0-16 | 0-35 |
| 17 | ದ್ಯಾವಪ್ಪ ಬಿನ್ ಬೈಯಪ್ಪ | 91 | ಖುಷ್ಕಿ | 0-02<br>0-03 rpk<br>0-05 | 0-09 |
| 18 | 1. ನಾರಾಯಣಗೌಡ ಬಿನ್ ಮುನೆಪ್ಪ<br>2. ವಿ. ರತ್ನಪ್ಪ | 94 | ಖುಷ್ಕಿ | 0-06<br>0-05 rpk<br>0-11 | 0-39 |
| 19 | ಟಿ. ರಾಮಪ್ಪ ಬಿನ್ ಕೊಂಡಪ್ಪ | 95 | ಬಾಗಾಯ್ತು | 0-08<br>0-06 rpk<br>0-14 | 0-69 |
| 20 | 1. ಎಸ್. ನಾರಾಯಣಪ್ಪ<br>2. ಎಸ್. ಹನುಮಂತರಾಯಪ್ಪ<br>3. ವಿ.ಎಸ್. ಕೃಷ್ಣಪ್ಪ<br>4. ಪಿ.ಎಲ್.ಡಿ. ಬ್ಯಾಂಕಿಗೆ ಆಧಾರ | 97 | ಭಾಗಾಯ್ತು | 0-06<br>0-05 rpk<br>0-11 | 0-36 |
| 21 | 1. ವಿ. ರತ್ನಪ್ಪ<br>2. ವಿ.ಎಂ. ನಾರಾಯಣಗೌಡ | 98/3 | ಖುಷ್ಕಿ | 0-04 | 0-44 |

| 1 | 2 | 3 | 4 | 5 | 6 |
|---|---|---|---|---|---|
| 22 | 1. ವಿ. ವೆಂಕಟರಾಮಯ್ಯ ಬಿನ್ ವೆಂಕಟೇಶಪ್ಪ<br>2. ವಿ. ರತ್ನಪ್ಪ ಬಿನ್ ವೆಂಕಟೇಶಪ್ಪ | 99/1 | ಖುಷ್ಕಿ | 0-02<br>0-01 rpk<br>0-03 | 0-10 |
| 23 | ಟಿ. ರಾಮಪ್ಪ ಬಿನ್ ಕೊಂಡಪ್ಪ | 99/2 | ಖುಷ್ಕಿ | 0-02<br>0-02 rpk<br>0-04 | 0-07 |
| 24 | ವಿ. ಮುನಿಯಪ್ಪ | 100/2 | ಖುಷ್ಕಿ | 0-04<br>0-04 rpk<br>0-08 | 0-25 |
| 25 | ಅಪ್ಪಯ್ಯ ಬಿನ್ ಮುನಿಶಾಮಿ | 101/2 | ಖುಷ್ಕಿ | 0-02<br>0-02 rpk<br>0-04 | 0-14 |
| | | | | **3-09** | |
| | **2. ಯಾನಾದಿಹಳ್ಳಿ** | | | | |
| 26 | ವೆಂಕಟೇಶಪ್ಪ | 77/3 | ಖುಷ್ಕಿ | 0-05 | 0-25 |
| 27 | ಚಿಕ್ಕನಂಜುಂಡಪ್ಪ | 77/4 | ಖುಷ್ಕಿ | 0-01 | 0-05 |
| 28 | ಮುನಿವೆಂಕಟಪ್ಪ<br>ಚಿಕ್ಕನಂಜುಂಡಪ್ಪ | 77/5 | ಖುಷ್ಕಿ | 0-02 | 0-10 |
| 29 | ಚಿಕ್ಕನಂಜುಂಡಪ್ಪ | 77/7 | ಖುಷ್ಕಿ | 0-03 | 0-15 |
| 30 | ದೊಡ್ಡ ನಂಜುಂಡಪ್ಪ ಬಿನ್ ವೆಂಕಟೇಶಪ್ಪ | 77/8 | ಖುಷ್ಕಿ | 0-03 | 0-15 |
| 36 | ದೊಡ್ಡಮುನೆಪ್ಪ | 78/3 | ಖುಷ್ಕಿ | 0-03 | 0-40 |
| | | | | **0-17** | |
| | **ಎರಡೂ ಗ್ರಾಮಗಳ ಒಟ್ಟು ವಿಸ್ತೀರ್ಣ** | | | **3-26** | |

**(ಒಟ್ಟು ಮೂರು ಎಕರೆ ಇಪ್ಪತ್ತಾರು ಗುಂಟೆ ಮಾತ್ರ)**

ಪಿ.ಆರ್. 1613 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಸಿರುಗುಪ್ಪ ತಾಲ್ಲೂಕು ಬಳ್ಳಾರಿ ಜಿಲ್ಲೆ

## ಅಧಿಸೂಚನೆ

**ಸಂಖ್ಯೆ: ತಾಸಕಅ:ಕಮಾಹಅ:2000-02, ಸಿಆರ್ 2:2004-05, ದಿನಾಂಕ: 31ನೇ ಅಕ್ಟೋಬರ್ 2005**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋಮಸ 021:(1) ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು ಸದರಿ ಅಧಿನಿಯಮದ ರೀತ್ಯ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ರಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಡಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯಿತಿಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಗ್ರೂಪ್ 'ಡಿ' ನೌಕರರು | 1 ಹುದ್ದೆ |

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರ.

| ಕ್ರ.ಸಂ. | ಸಂಸ್ಥೆಗಳ ಹೆಸರು | ಸಂಖ್ಯಾಬಲ |
|---|---|---|
| 1 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಸಿರುಗುಪ್ಪ | 60 |
| 2 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಸಿರುಗುಪ್ಪ | 135 |
| 3 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ತೆಕ್ಕಲಕೋಟೆ | 105 |
| 4 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ರಾರಾವಿ. | 55 |
| 5 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಶಿರಿಗೇರಿ | 50 |
| 6 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಸಿರುಗುಪ್ಪ-2 | 50 |
| 7 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಸಿರುಗುಪ್ಪ | 50 |
| 8 | ಪರಿಶಿಷ್ಟ ಪಂಗಡದ ಆಶ್ರಮ ಶಾಲೆ, ತೆಕ್ಕಲಕೋಟೆ | 100 |
| 9 | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಕೇಂದ್ರ, 6ನೇ ವಾರ್ಡ್, ಸಿರುಗುಪ್ಪ | 50 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಹಾಗೂ ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನ ಸಹಾಯ.
2. ನರ್ಸರಿ ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳು.
3. ಕಟ್ಟಡಗಳ ನಿರ್ವಹಣೆ
4. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ
5. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ
6. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
7. ಪ್ರತಿಭಾ ವಿದ್ಯಾರ್ಥಿವೇತನ
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
9. ಪರಿಶಿಷ್ಟ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ
10. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
11. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಮೆ.ಪೂ.ವಿದ್ಯಾರ್ಥಿವೇತನ
12. 1 ರಿಂದ 4ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ
13. ಅಸ್ಪೃಶ್ಯತಾ ನಿವಾರಣೆ
14. ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡದವರಿಗೆ ಪರಿಹಾರ
15. ಜಾತಿ ಪರಿಶೀಲನೆ.
16. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ.
17. ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ
18. 6 ರಿಂದ 7ನೇ ಹಾಗೂ 8 ರಿಂದ 10ನೇ ವರ್ಗದ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹ ಧನ.
19. ಅಂತರಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹ ಧನ.

2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಣ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು : ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕರ್ತವ್ಯಗಳು:**

1) ತಾಲ್ಲೂಕಿನ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
2) ಪ್ರತಿ ತಿಂಗಳು ಕನಿಷ್ಟ 15 ದಿನ ಪ್ರವಾಸ ಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಹಾಗೂ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.
3) ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.
4) ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಾಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.
5) ಮೇಲಾಧಿಕಾರಿಗಳಿಗೆ ತಿಂಗಳ, 3 ತಿಂಗಳ ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.
6) ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ, ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.
7) ತಾಲ್ಲೂಕಿನಲ್ಲಿರುವ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:**

8) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯ ವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕ ಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.

9) ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ ಅನುದಾನಿತ ಮೆ. ಪೂರ್ವ ಮತ್ತು ಮೆ.ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.

10) ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ ವಿತರಣೆ ಮಾಡುವುದು.

11) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.

12) ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.

13) ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.

14) ವಿದ್ಯಾರ್ಥಿನಿಲಯಗಳ ಕಟ್ಟಡ ಕಟ್ಟುವುದು ಮಿನಿ ಅಂಬೇಡ್ಕರ್ ಭವನ ಕಟ್ಟುವುದು ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡಗಳನ್ನು ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.

15) ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೊ ಎಸ್.ಆರ್.ಇ.ಪಿ., ಪಿ.ಎಲ್.ಜಿ.ಆರ್. ಎಸ್.ಸಿ.ಹೆಚ್. ಯೋಜನೆಯಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.

16) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿ.ಆರ್. ನಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯಾದಾನಿಯಾಗಿ ಕಾರ್ಯನಿರ್ವಹಿಸುವುದು.

17) ನೈಸರ್ಗಿಕ ಹಾವಳಿ ಮತ್ತು ಬೆಂಕಿ ಅನಾಹುತದಲ್ಲಿ ನೊಂದ ಸಂತ್ರಸ್ಥರಿಗೆ ಧನ ಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.

18) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಸಲುವಾಗಿ ಮನೆ, ಹಾಗೆ ಸ್ಮಶಾನ ಜಾಗ ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ, ಭೂಮಿ ಖರೀದಿ ಬಗ್ಗೆ ಪ್ರಕರಣಗಳನ್ನು ತಯಾರಿಸುವುದು, ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು, ಸರ್ಕಾರಿ ಜಮೀನನ್ನು ಅಭಿವೃದ್ಧಿ ಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದು ಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕಾಭಿವೃದ್ಧಿ:**

19) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ ಕೈಗಾರಿಕೆ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.

20) ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಸೋಷಿಯಲ್ ಹಾಗೂ ಎಕಾನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನ, ಐ.ಆರ್.ಡಿ.ಪಿ. ಟಿ.ಎಸ್.ಪಿ. ಅಂತ್ಯೋದಯ, ಟ್ರಾಯಿಜಂ, ಯೋಜನೆಗಳ ಸಾಮಾಜಿಕ ಆರ್ಥಿಕ ಸಮೀಕ್ಷೆ ಕೈಗೊಳ್ಳುವುದು.

21) ಭೂ ರಹಿತ ಕಾರ್ಮಿಕರನ್ನು ಗುರುತಿಸುವುದು.

22) ಸ್ಥಳೀಯ ಸಂಸ್ಥೆಗಳು ಕಾಯ್ದಿರಿಸಿದ ಶೇಕಡಾ 18 : ಮತ್ತು 20:ರ ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

23) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರು ಕುರಿತು ಪ್ರಕರಣ ತಯಾರಿಸುವುದು.

24) ಪರಿಶಿಷ್ಟ ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗಳಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.

25) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಯಾರು ವೃದ್ಧಾಪ್ಯವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಸಂಕ್ರಾಮಿಕ ರೋಗದಿಂದ ಬಳಲುವವರೋ ಅಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.

26) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ:**

27) ಸರ್ಕಾರಿ ಇಲಾಖೆ ಅರೆ ಸರ್ಕಾರಿ ಇಲಾಖೆ ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ಸಲ್ಲಿಸುವುದು.

28) ಇತರೆ ಇಲಾಖೆಯಿಂದ ಜಾತಿ ಪರಿಶೀಲನೆಗೆ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.

29) ಸರ್ಕಾರಿ ಸಂಘಗಳಲ್ಲಿ ಯುತ್ ಕ್ಲಬ್‌ಗಳಲ್ಲಿ ಮಹಿಳಾ ಮಂಡಳಿಗಳಲ್ಲಿ ಸ್ಥಳೀಯ ಅಭಿವೃದ್ಧಿಯ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.

30) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ : ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಅಧಿಕಾರಿಗಳು ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಆಯಾಯ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವುದು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಆಗುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈ ಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**ಇಲಾಖೆಯು ತನ್ನ ಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗಾಗಿ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷರಿಂದ ವಿಷಯ ನಿರ್ವಾಹಕರ ಮೇಲೆ ರುಜು ತಪಾಸಣೆ ಕಾರ್ಯ ಕೈಗೊಳ್ಳುವುದು.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಗಾರ ನಡೆಸುವುದು.
5) ಸರ್ಕಾರವು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದು ಕೊರತೆಗಳ ನಿರ್ವಹಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಘ.ಯೋ.) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿಯೂ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 1614 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಸಿರುಗುಪ್ಪ.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಧಾರವಾಡ

## ಅಧಿಸೂಚನೆ

**ಸಂಖ್ಯೆ: ಜಿಸಕ:ಎಸ್-4:ಸಿಆರ್-43:2003-04, ದಿನಾಂಕ: 10ನೇ ಅಕ್ಟೋಬರ್ 2005**

**ವಿಷಯ :** ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ 22)

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯುವ ಅವಕಾಶದ ಹಕ್ಕಿಗಾಗಿ ಒಂದು ಶಾಸನವನ್ನು ರಚಿಸುವುದು ಅಗತ್ಯವೆಂದು ಮನಗಂಡು "ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005" (2005ರ ಕೇಂದ್ರ ಕಾಯ್ದೆ ಸಂಖ್ಯೆ 22) ನ್ನು ಜಾರಿಗೊಳಿಸಲಾಗಿದೆ. ಈ ಅಧಿನಿಯಮದ ಪ್ರಕಾರ ಆಯಾ ಕಛೇರಿ/ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳೆಂದು ಗುರುತಿಸಿ ಸದರಿ ಅಧಿನಿಯಮ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರಯನ್ನು ಚಲಾಯಿಸಿ ಆಯಾ ಕಛೇರಿ/ಸಂಸ್ಥೆಗಳಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 5(2)ರ ಅಡಿಯಲ್ಲಿ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಬೇಕಾಗಿದೆ.

ಅದರಂತೆ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ ಸಂಸ್ಥೆಗಳಿಗೆ ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಸೆಕ್ಷನ್ 2(4) ರನ್ವಯ "ಸಾರ್ವಜನಿಕ ಪ್ರಾಧಿಕಾರ" ಎಂದು ಗುರುತಿಸಬೇಕಾಗಿದೆ. ಸದರಿ ಸಂಸ್ಥೆಗಳಲ್ಲಿ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಗಳನ್ನು ಗುರುತಿಸಲಾಗಿದೆ. ಅದೇ ರೀತಿ ಅಧಿನಿಯಮದ ಸೆಕ್ಷನ್ 19(1)ರ ಅಡಿಯಲ್ಲಿ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಆಯಾ ಸಂಸ್ಥೆಗಳಲ್ಲಿ ಮೇಲ್ಮನವಿ ಪ್ರಾಧಿಕಾರ ಎಂದು ಗುರುತಿಸಲಾಗಿದೆ.

| ಕ್ರ. ಸಂ. | ಸಂಸ್ಥೆಗಳು (ಸಾರ್ವಜನಿಕ ಪ್ರಾಧಿಕಾರ) | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1 | 2 | 3 | 4 | 5 |
| 1) | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಧಾರವಾಡ. | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು. | ಕಛೇರಿ ಅಧೀಕ್ಷಕರು | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿ.ಪಂ. ಧಾರವಾಡ. |
| 2) | ಜಿಲ್ಲೆಯ ಎಲ್ಲಾ ತಾಲ್ಲೂಕ್ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗಳು. | ತಾಲ್ಲೂಕ್ ಸಮಾಜ ಕಲ್ಯಾಣ ಅಧಿಕಾರಿಗಳು. | ಆಯಾ ಕಛೇರಿ ಅಧೀಕ್ಷಕರು. | ಆಯಾ ತಾಲ್ಲೂಕಿನ ತಾಲ್ಲೂಕ್ ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳು. |

ಮೇಲ್ಕಂಡ ಎಲ್ಲಾ ತಾಲ್ಲೂಕ್ ಸಮಾಜ ಕಲ್ಯಾಣ ಅಧಿಕಾರಿಗಳು ತಮ್ಮ ಕಛೇರಿಗೆ ಸಂಬಂಧಿಸಿದಂತೆ "ಸಾರ್ವಜನಿಕ ಮಾಹಿತಿ ಅಧಿಕಾರಿ", "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಮೇಲ್ಮನವಿ ಪ್ರಾಧಿಕಾರ" ಗಳನ್ನು ಗುರುತಿಸಿ ಅಧಿಸೂಚನೆಗಳನ್ನು ಹೊರಡಿಸುವಂತೆ ಸೂಚಿಸಲಾಗಿದೆ.

ಪಿ.ಆರ್. 1615 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ :** ಸ್ಥಗಿತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮುದೋಳ (ಬಿ)** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006, ದಿನಾಂಕ: 30.09.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೋಂದಣಿ ಸಂಖ್ಯೆ: ಎಆರ್1/ಎಸ್.4/ಹೆಚ್.ಓ.ಟಿ/18339/1994-95, ದಿನಾಂಕ: 07.12.1995 ರಲ್ಲಿ ನೋಂದಣಿ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮುದೋಳ (ಬಿ) ತಾ: ಔರಾದ (ಬಿ)** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005-06/2816, ದಿನಾಂಕ: 20ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 (2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200/ ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ ಬೀದರ್ ಆದ ನಾನು ಸ್ಥಗಿತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮುದೋಳ (ಬಿ) ತಾ: ಔರಾದ (ಬಿ) ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆದ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶವು 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 20.10.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1636 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**

**ದ. ಕ. ಉಪ ವಿಭಾಗ-1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್-5:2004, ದಿನಾಂಕ: 18ನೇ ಅಕ್ಟೋಬರ್ 2005**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1) ದೇವಕಿ ವೈಫ್ ಆಫ್ ತಿಮ್ಮಪ್ಪ | | 1) ನಿರಂಜನ್ ರಾವ್ ಸನ್ ಆಫ್ ನಾರಾಯಣರಾವ್ |
| 2) ಪ್ರಶಾಂತ್ ಸನ್ ಆಫ್ ದಿ ತಿಮ್ಮಪ್ಪ | | ಮಾನಸ, ಕೋಡಿಕಲ್, ಮಂಗಳೂರು. |
| 3) ಚಂಚಲಾಕ್ಷಿ ದಿ ತಿಮ್ಮಪ್ಪರ ಮಗಳು | | 2) ಅನಂತಕೃಷ್ಣರಾವ್ |
| 4) ಲಕ್ಷ್ಮಿ ದಿ ತಿಮ್ಮಪ್ಪರ ಮಗಳು | | ಕೇರ್ ಆಫ್ ಮಾನಸ, ಕೋಡಿಕಲ್, ಮಂಗಳೂರು. |
| ಮೂಡುಶೆಡ್ಡೆ ಅಂಚೆ, ಮಂಗಳೂರು ತಾಲ್ಲೂಕು. | | |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ದೇವಕಿ ಇವರು ತಮ್ಮ ಗಂಡನಾದ ಶ್ರೀ ತಿಮ್ಮಪ್ಪ ಇವರು 1ನೇ ಪ್ರತಿವಾದಿಗಳಾದ ನಿರಂಜನ್‌ರಾವ್ ಇವರಲ್ಲಿ ಕೆಲಸಗಾರರಾಗಿದ್ದು ದಿನಾಂಕ: 28.5.2004 ರಂದು ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**

ಪಿ.ಆರ್. 1616 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ. ಕ. ಉಪ ವಿಭಾಗ-1, ಮಂಗಳೂರು.

## ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಧನ್ವಂತರಿ ರಸ್ತೆ, ಬೆಂಗಳೂರು - 09

**ಪ್ರಕಟಣೆ ಸಂಖ್ಯೆ: ಭಾವೈಪ:04:ಅಂಕಿಅಂಶ(1):2005-06, ದಿನಾಂಕ: 23ನೇ ಸೆಪ್ಟೆಂಬರ್ 2005**

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವೈದ್ಯಪದ್ಧತಿಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ 6 ಜನ ವೈದ್ಯರುಗಳಿಗೆ (ಆಯುರ್ವೇದ-3 ಹಾಗೂ ಯುನಾನಿ ಹೋಮಿಯೋಪತಿ, ಪ್ರಕೃತಿ ಚಿಕಿತ್ಸೆ:ಯೋಗ ವೈದ್ಯಪದ್ಧತಿಗಳ ತಲಾ ಒಬ್ಬ ವೈದ್ಯರಿಗೆ) ರೂ.250-00ಗಳ ಮಾಸಿಕ ಪಿಂಚಣಿಯನ್ನು 2005-06ನೇ ಸಾಲಿನಲ್ಲಿ ನೀಡಿ ಗೌರವಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿದಾರರು, ನೋಂದಾಯಿತ ವೈದ್ಯ ವೃತ್ತಿದಾರರಾಗಿದ್ದು, 60 ವರ್ಷಗಳನ್ನು ಪೂರೈಸಿ, ವೈದ್ಯವೃತ್ತಿಯಲ್ಲಿ ಗಣನೀಯ ಸೇವೆ ಸಲ್ಲಿಸಿರುವಿಕೆ, ಸಂಸ್ಥೆಗಳ ಸ್ಥಾಪನೆ, ವೈದ್ಯಕೀಯ ಉಚಿತ ಸೇವೆ ನೀಡುವಿಕೆ, ಸಂಶೋಧನೆ, ಪುಸ್ತಕ ಪ್ರಕಟಣೆ, ಯಾವುದೇ ಮೂಲದಿಂದ ಆದಾಯವಿಲ್ಲದಿರುವ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

ನಿಗದಿತ ಅರ್ಜಿ ಫಾರಂಗಳನ್ನು ಆಯಾ ಜಿಲ್ಲೆಗಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿಗಳಲ್ಲಿ ಮತ್ತು ಈ ಕೆಳಕಂಡ ವಿಳಾಸಗಳಲ್ಲಿರುವ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವಿಭಾಗೀಯ ಕಛೇರಿಗಳಲ್ಲಿ ಪಡೆಯಬಹುದು.

1) ಧನ್ವಂತರಿ ರಸ್ತೆ, ಬೆಂಗಳೂರು-560009.
2) ಸಯ್ಯಾಜೀರಾವ್ ರಸ್ತೆ, ಮೈಸೂರು-570027.
3) ವಿಶ್ವೇಶ್ವರ ನಗರ, ಬೆಳಗಾಂ.
4) ಅತ್ತರ ಕಾಂಪೌಂಡ್, ಗಾಜೀಪುರ, ಗುಲ್ಬರ್ಗಾ-565101.
5) ಜಿಲ್ಲಾ ಆಯುರ್ವೇದ ಆಸ್ಪತ್ರೆಗಳು, ಬಾಗಲಕೋಟೆ : ಬಳ್ಳಾರಿ : ಬೀದರ್ : ಬಿಜಾಪುರ : ಚಾಮರಾಜನಗರ : ಗದಗ : ಗುಲ್ಬರ್ಗಾ : ಹಾಸನ : ಹಾವೇರಿ : ಹುಬ್ಬಳ್ಳಿ : ಕಡೂರು : ಕಾರವಾರ : ಕೋಲಾರ : ಕೊಪ್ಪಳ : ಮಂಗಳೂರು : ಮಂಡ್ಯ : ರಾಯಚೂರು : ಶಿವಮೊಗ್ಗ : ತುಮಕೂರು.
6) ಸರ್ಕಾರಿ ಪ್ರಕೃತಿ ಚಿಕಿತ್ಸಾಲಯ, ದಾವಣಗೆರೆ. (7) ಎಲ್ಲಾ ಜಿಲ್ಲಾ ಆ.ಕು.ಕ. ಅಧಿಕಾರಿಗಳು.

ಇದಲ್ಲದೆ, ಬೆಂಗಳೂರು, ಮೈಸೂರು, ಬಳ್ಳಾರಿಯಲ್ಲಿರುವ ಸರ್ಕಾರಿ ಆಯುರ್ವೇದ ಮಹಾವಿದ್ಯಾಲಯಗಳು ಸೇರಿದಂತೆ, ಬೆಂಗಳೂರಿನ ಯುನಾನಿ:ಹೋಮಿಯೋಪತಿ ಮಹಾವಿದ್ಯಾಲಯಗಳ ಪ್ರಾಚಾರ್ಯರ ಕಛೇರಿಗಳಲ್ಲಿ ದೊರೆಯುವುದು.

ಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ವಯಸ್ಸಿನ ದಾಖಲೆಯ ದೃಢೀಕರಣ ಪ್ರತಿಗಳು, ವೈದ್ಯರ ವೃತ್ತಿಯ ರಿಜಿಸ್ಟ್ರೇಷನ್ ಸರ್ಟಿಫಿಕೇಟ್‌ನ ಪ್ರತಿ ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಬಗ್ಗೆ ಸರ್ಕಾರ ಹಾಗೂ ಇನ್ನಿತರ ಸಂಘ ಸಂಸ್ಥೆಗಳಿಂದ ಬಂದಿರುವ ಪ್ರಮಾಣ ಪತ್ರಗಳು ಇತ್ಯಾದಿಗಳೊಂದಿಗೆ ನೇರವಾಗಿ ನಿರ್ದೇಶಕರು, ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಧನ್ವಂತರಿ ರಸ್ತೆ, ಬೆಂಗಳೂರು ಇವರಿಗೆ ದಿನಾಂಕ: 31.10.2005ರ ಒಳಗಾಗಿ ತಲುಪುವಂತೆ ಕಳುಹಿಸಲು ಕೋರಲಾಗಿದೆ.

ನಿರ್ದೇಶಕರು,

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು.

### 2005-06ನೇ ಸಾಲಿನಲ್ಲಿ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವೈದ್ಯಪದ್ಧತಿಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವೈದ್ಯರಿಗೆ ಮಾಸಿಕ ಪಿಂಚಣಿ ಮಂಜೂರಾತಿಗಾಗಿ ಅರ್ಜಿ

**ಸೂಚನೆ:** 60 ವರ್ಷ ಮೇಲ್ಪಟ್ಟಿರುವವರು ಮಾತ್ರ ಅರ್ಹರಾಗಿರುತ್ತಾರೆ.

| | | |
|---|---|---|
| 1. | ಹೆಸರು (ಬಿಡಿ ಅಕ್ಷರಗಳಲ್ಲಿ) | |
| 2. | ವಯಸ್ಸು ಮತ್ತು ಹುಟ್ಟಿದ ದಿನಾಂಕ: | ವರ್ಷಗಳು |
| 3. | ತಂದೆ ಹೆಸರು | |
| 4. | ವಿಳಾಸ: | ಎ) ಅಂಚೆ ಸಂಪರ್ಕ ವಿಳಾಸ ಬಿ) ಖಾಯಂ ವಿಳಾಸ |
| 5. | ವಿದ್ಯಾರ್ಹತೆ | |
| 6. | ಯಾವ ವೃತ್ತಿಯಲ್ಲಿ ವೈದ್ಯವೃತ್ತಿ ನಡೆಸುತ್ತಿರುತೀರಿ?<br>ಬಿ) ನೋಂದಣಿ ಸಂಖ್ಯೆ | ಆಯುರ್ವೇದ : ಯುನಾನಿ : ಪ್ರಕೃತಿ ಚಿಕಿತ್ಸೆ ಯೋಗ ಮತ್ತು ಹೋಮಿಯೋಪತಿ |
| 7. | ವಾರ್ಷಿಕ ವರಮಾನ (ಎಲ್ಲಾ ಮೂಲಗಳಿಂದ) | ಒಂದು ವರ್ಷಕ್ಕೆ |
| 8. | ಅನುಭವ ಮತ್ತು ಕಾರ್ಯಕ್ಷೇತ್ರ<br>ಎ) ವೈದ್ಯವೃತ್ತಿಯಲ್ಲಿ ತೊಡಗಿಸಿಕೊಂಡ ವರ್ಷಗಳು<br>ಬಿ) ಬರೆದಿರುವ ಪುಸ್ತಕಗಳು<br>ಸಿ) ಸಂಶೋಧನೆ<br>ಡಿ) ಔಷಧಿಗಳ ತಯಾರಿಕೆ : ಚಿಕಿತ್ಸೆ<br>ಇ) ಚಿಕಿತ್ಸಾಲಯ : ಆಸ್ಪತ್ರೆ ಸ್ಥಾಪನೆ<br>ಎಫ್) ಈಗಿನ ವೃತ್ತಿ<br>ಜಿ) ಇತರೆ ವಿವರಗಳನ್ನು ಪ್ರತ್ಯೇಕವಾಗಿ ನೀಡುವುದು. | |
| 9. | ಸರ್ಕಾರ:ಸಂಘ ಸಂಸ್ಥೆಗಳು ನೀಡಿರುವ ಪ್ರಶಸ್ತಿ ಮತ್ತು ಪುರಸ್ಕಾರಗಳು ಇತ್ಯಾದಿ ವಿವರಗಳು. | |
| 10. | ಈ ಕೆಳಕಂಡ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸಲಾಗಿದೆಯೇ? | |
| | ಎ) ವೈದ್ಯವೃತ್ತಿಯ ರಿಜಿಸ್ಟ್ರೇಷನ್ ಪ್ರಮಾಣ ಪತ್ರದ ಜೆರಾಕ್ಸ್ ಪ್ರತಿ. | |

| | ಬಿ) ಆದಾಯ ಪ್ರಮಾಣ ಪತ್ರ (ಕಂದಾಯ ಅಧಿಕಾರಿಗಳಿಂದ)<br>ಸಿ) ಇತ್ತೀಚಿನ 2 ಭಾವಚಿತ್ರಗಳು (ಪಾಸ್‌ಪೋರ್ಟ್ ಅಳತೆಯ)<br>ಡಿ) ಸರ್ಕಾರಿ:ಸಂಘ:ಸಂಸ್ಥೆಗಳು ನೀಡಿರುವ ಪ್ರಶಸ್ತಿಗಳ ಪ್ರತಿಗಳು.<br>ಇ) ವಿದ್ವಾರ್ಹತೆಯ ಬಗ್ಗೆ ಪ್ರಮಾಣ ಪತ್ರ. | |
|---|---|---|

**ಘೋಷಣೆ:-** 1) ನಾನು ದಿನಾಂಕ: 01.11.2005 ರೊಂದಿಗೆ ನನ್ನ ವಯಸ್ಸು 60 ವರ್ಷಗಳು ಪೂರ್ಣವಾಗಿದೆ ಎಂದು ಘೋಷಿಸುತ್ತೇನೆ.

2) ಅರ್ಜಿಯಲ್ಲಿ ನಾನು ಕೊಟ್ಟಿರುವ ಮಾಹಿತಿ : ದಾಖಲೆಗಳು ಸತ್ಯವಾಗಿರುತ್ತದೆ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ:
ದಿನಾಂಕ:

ಅರ್ಜಿದಾರರ ಸಹಿ

(ಅರ್ಜಿದಾರರ ಸಹಿ ನನ್ನ ಮುಂದೆ ಆಗಿದೆ)
ಗೆಜೆಟೆಡ್ ಅಧಿಕಾರಿಯವರ ಸಹಿ ಮತ್ತು ಪದನಾಮ (ದಿನಾಂಕ ಸಹಿತ)

ನಿರ್ದೇಶಕರು,
ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು.

ಪಿ.ಆರ್. 1617

**STENOGRAPHERS & TYPISTS SELECTION AUTHORITY**
**20th Floor, V.V. Main Tower, Dr. Ambedkar Veedhi, Bangalore-560 001.**

**NOTIFICATION**

**No. Sheebepra 24 Ithare 2005, Dated: 26th September 2005**

In terms of section 5(1) of Right to Information Act 2005 (Central Act 22 of 2005), the Administrative Officer, Stenographers and Typists Selection Authority is hereby appointed as State Public Information Officer, in so far as the Stenographers & Typists Selection Authority is concerned.

Further in terms of Section 19(1) of the Right to Information Act 2005, the Deputy Secretary to Government, D.P.A.R. (Administration) and Stenographers & Typists Selection Authority is appointed as First Appellate Authority to exercise the power conferred upon the First Appellate Authority under the Right to Information Act in so far as Stenographers & Typists Selection is concerned.

By Order and in the name of the Governor of Karnataka,

**K. NARAYANA**
Administrative Officer,
Stenographers & Typists Selection Authority.

P.R. 1618

**ನಿರ್ದೇಶನಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ**
**ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಭವನ, ನಂ.58, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ರಸ್ತೆ,**
**ಬೆಂಗಳೂರು-560025**

**ಸಂಖ್ಯೆ: ಸೈಕಪುಇ/ಸಿಬ್ಬಂದಿ/ಭಾಸ/ಮಾಹಮ/2005, ದಿನಾಂಕ: 6ನೇ ಅಕ್ಟೋಬರ್ 2005**

ಕೇಂದ್ರ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರ ಇಲಾಖೆಗೆ ಸಂಬಂಧಿಸಿದಂತೆ ಸೆಕ್ಷನ್ 2(ಹೆಚ್)ರ ಅಡಿಯಲ್ಲಿ ಈ ಕೆಳಗೆ ಕಾಣಿಸಿದಂತೆ ಸಾರ್ವಜನಿಕ ಪ್ರಾಧಿಕಾರಗಳನ್ನು ಗುರುತಿಸಲಾಗಿದೆ.

1) ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು-560 025.
2) ಜಂಟಿ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು (ನಗರ)-25.
3) ಜಂಟಿ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಳಗಾವಿ.
4) ಜಂಟಿ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ವಿಜಾಪೂರ.
5) ಜಂಟಿ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಗುಲ್ಬರ್ಗಾ.
6) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಧಾರವಾಡ.
7) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಶಿವಮೊಗ್ಗ.
8) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಕಾರವಾರ.
9) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಂಗಳೂರು.
10) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮೈಸೂರು.
11) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಡಿಕೇರಿ
12) ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು (ಗ್ರಾಮಾಂತರ).

ಮೇಲ್ಕಾಣಿಸಿದ ಸಾರ್ವಜನಿಕ ಪ್ರಾಧಿಕಾರಿಗಳಿಂದ ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005 5(1) ಮತ್ತು 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 'ಸಾರ್ವಜನಿಕ ಮಾಹಿತಿ ಅಧಿಕಾರಿ' ಹಾಗೂ 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಗಳನ್ನು ಹಾಗೂ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನಂತೆ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಶಾಖೆ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1 | ನಿರ್ದೇಶಕರ ಕಾರ್ಯಾಲಯ, ಬೆಂಗಳೂರು. | ಜಂಟಿ ನಿರ್ದೇಶಕರು (ಕೇಂದ್ರ ಸ್ಥಾನ) | ಸಹಾಯಕ ನಿರ್ದೇಶಕರು (ಕೇಂದ್ರ ಸ್ಥಾನ) | ನಿರ್ದೇಶಕರು |
| 2 | ಜಂಟಿ ನಿರ್ದೇಶಕರ ಕಾರ್ಯಾಲಯ, ಬೆಂಗಳೂರು (ನಗರ). | ಜಂಟಿ ನಿರ್ದೇಶಕರು | ಕಛೇರಿ ಅಧೀಕ್ಷಕರು | ನಿರ್ದೇಶಕರು ನಿರ್ದೇಶನಾಲಯ ಬೆಂಗಳೂರು |
| 3 | ಜಂಟಿ ನಿರ್ದೇಶಕರ ಕಾರ್ಯಾಲಯ, ಬೆಳಗಾವಿ. | ಜಂಟಿ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 4 | ಜಂಟಿ ನಿರ್ದೇಶಕರ ಕಾರ್ಯಾಲಯ, ವಿಜಾಪೂರ | ಜಂಟಿ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 5 | ಉಪ ನಿರ್ದೇಶಕರ ಕಾರ್ಯಾಲಯ, ಗುಲ್ಬರ್ಗಾ. | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 6 | ಉಪ ನಿರ್ದೇಶಕರ ಕಾರ್ಯಾಲಯ, ಧಾರವಾಡ | ಉಪ ನಿರ್ದೇಶಕರು | ವ್ಯವಸ್ಥಾಪಕರು | -ಸದರ- |
| 7 | ಉಪ ನಿರ್ದೇಶಕರ ಕಾರ್ಯಾಲಯ, ಶಿವಮೊಗ್ಗ. | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 8 | ಉಪ ನಿರ್ದೇಶಕರ ಕಾರ್ಯಾಲಯ, ಕಾರವಾರ. | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 9 | ಉಪ ನಿರ್ದೇಶಕರ ಕಾರ್ಯಾಲಯ, ಮಂಗಳೂರು. | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 10 | ಉಪ ನಿರ್ದೇಶಕರ ಕಾರ್ಯಾಲಯ, ಮೈಸೂರು. | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |
| 11 | ಉಪ ನಿರ್ದೇಶಕರ ಕಾರ್ಯಾಲಯ, ಮಡಿಕೇರಿ | ಉಪ ನಿರ್ದೇಶಕರು | ವ್ಯವಸ್ಥಾಪಕರು | -ಸದರ- |
| 12 | ಉಪ ನಿರ್ದೇಶಕರ ಕಾರ್ಯಾಲಯ, ಬೆಂಗಳೂರು (ಗ್ರಾಮಾಂತರ) | ಉಪ ನಿರ್ದೇಶಕರು | ಕಛೇರಿ ಅಧೀಕ್ಷಕರು | -ಸದರ- |

ನಿರ್ದೇಶಕರು,

ಪಿ.ಆರ್. 1621 ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು-560 025.

**ಅಪರ ಕೃಷಿ ನಿರ್ದೇಶಕರ ಕಛೇರಿ,**
**ರಾಜ್ಯ ಭೂಬಳಕೆ ಮಂಡಳಿ, ಕೃಷಿ ಆಯುಕ್ತಾಲಯದ ಆವರಣ, ಶೇಷಾದ್ರಿ ರಸ್ತೆ, ಬೆಂಗಳೂರು-1**
**ಸಂಖ್ಯೆ: ಅಕೃನಿ:ರಾಭೂಬಮಂ ಹಕ್ಕು ಕಾಯಿದೆ:2005-06, ದಿನಾಂಕ: 28ನೇ ಸೆಪ್ಟೆಂಬರ್ 2005**

**ವಿಷಯ :** ಭಾರತ ಸರ್ಕಾರದ ಮಾಹಿತಿ ಮತ್ತು ಹಕ್ಕು ಅಧಿನಿಯಮ 2005ರ ಅನ್ವಯ ಕೃಷಿ ಇಲಾಖೆಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನು ಹಾಗೂ ಅಪೀಲು ಅಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** 1) ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005.
2) ಸರ್ಕಾರದ ಪತ್ರದ ಸಂಖ್ಯೆ: ಕೃತೋಇ:59:ಕೃತೋಸ:2005, ದಿನಾಂಕ: 8.9.2005.

**ಕಛೇರಿ ಆದೇಶ**

ಉಲ್ಲೇಖ (1)ರ ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ - 2005 ಜಾರಿಯಲ್ಲಿ ಬಂದಿದ್ದು, ಅಧಿನಿಯಮದ ಕಂಡಿಕೆ 5(1) 5(2) ಮತ್ತು 19(1)ರ ಅನ್ವಯ ರಾಜ್ಯ ಭೂಬಳಕೆ ಮಂಡಳಿಯಲ್ಲಿ ಈ ಕೆಳಕಂಡಂತೆ ನಮೂದಿಸಿರುವ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ, ಹಾಗೂ ಅಪೀಲು ಪ್ರಾಧಿಕಾರದ ಅಧಿಕಾರಿಗಳನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕಾತಿ ಮಾಡಿ ಆದೇಶಿಸಲಾಗಿದೆ.

| ಕ್ರ. ಸಂ. | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಅಪೀಲು ಪ್ರಾಧಿಕಾರ |
|---|---|---|---|
| 1 | ಉಪ ಕೃಷಿ ನಿರ್ದೇಶಕರು (ಅಗ್ರಾನಮಿ) ರಾಜ್ಯ ಭೂಬಳಕೆ ಮಂಡಳಿ ಕಛೇರಿ, ಕೃಷಿ ಆಯುಕ್ತಾಲಯ ಆವರಣ ಶೇಷಾದ್ರಿ ರಸ್ತೆ, ಬೆಂಗಳೂರು. | ಕೃಷಿ ಅಧಿಕಾರಿ, ಭೂಬಳಕೆ ಮಂಡಳಿ ಕಛೇರಿ, ಕೃಷಿ ಆಯುಕ್ತಾಲಯ ಆವರಣ ಶೇಷಾದ್ರಿ ರಸ್ತೆ, ಬೆಂಗಳೂರು | ಅಪರ ಕೃಷಿ ನಿರ್ದೇಶಕರು, ಭೂಬಳಕೆ ಮಂಡಳಿ ಕಛೇರಿ, ಕೃಷಿ ಆಯುಕ್ತಾಲಯ ಆವರಣ ಶೇಷಾದ್ರಿ ರಸ್ತೆ, ಬೆಂಗಳೂರು |

ಪಿ.ಆರ್. 1622 ಅಪರ ಕೃಷಿ ನಿರ್ದೇಶಕರು, ರಾಜ್ಯ ಭೂಬಳಕೆ ಮಂಡಳಿ, ಬೆಂಗಳೂರು.

**STENOGRAPHERS & TYPISTS SELECTION AUTHORITY**
**20th Floor, V.V. Main Tower, Dr. Ambedkar Veedhi, Bangalore-560 001.**
**NOTIFICATION**
**No. Sheebepra 24 Ithare 2005, Dated: 11th October 2005**

In accordance with clause (1) of sub-section (b) of section 4 of the Right to Information Act, 2005 (Central Act 22 of 2005), the detailed information relating to the Stenographers & Typists Selection Authority is published as hereunder:-

**4(b) (i) The particulars of its organisation, functions and duties;**

**OFFICERS:** Deputy Secretary to Government D.P.A.R. (Administration) and Stenographers & Typists Selection Authority.
Administrative Officer
Assistant Administrative Officer.

**EMPLOYEES:** Senior Assistant
Assistant - I
Assistant - II
Stenographer
Typist
Junior Assistant
Dalayath

**FUNCTIONS:** Selecting candidates for the post of Stenographers and Typists in the Departments of Karnataka Government.

**4(b) (ii) The Powers and duties of its officers and employees:**

| | |
|---|---|
| DALAYATH | To keep the office neat and tidy. To deliver the files/tappals to other sections/departments as per the instructions of Secretariat Manual of Office Procedure. |
| JUNIOR ASSISTANT | In charge of the work of Dairying, movements, distribution of receipts/files in the section. |
| TYPIST | In charge of the typing work at Section. |
| CASE WORKERS (SENIOR ASSISTANT/ ASSISTANT) | To attend to the work of case working as per the duties cast on them in the secretariat Manual. |
| P.A./STENOGRAPHER | In charge of receipt of tappals/files by Administrative officer/Assistant Administrative Officer, Typing and Stenography work entrusted by Administrative Officer/Assistant Administrative Officer. |
| ASSISTANT ADMINISTRATIVE OFFICER | In charge of the whole section. Scrutiny of applications for the posts of Stenographers and Typists and files submitted by the case worker as per the procedure of Secretariat Manual. |
| ADMINISTRATIVE OFFICER | In charge of the whole section. Scrutiny of applications for the posts of Stenographers and Typists and files submitted by Assistant Administrative Officer. Issue of Order/Letters/Circulars/Notifications, etc., on behalf of the Authority. |
| DEPUTY SECRETARY | Head of the Organisation. Official Authority on behalf of the Stenographers & Typists Selection Authority. |

**4(b) (iii) The procedure followed in the decision making process, including channe's of supervision and accountability;**

| | |
|---|---|
| CASE WORKER | Opening of a new file on receipt of a proposal OR processing the receipt in the existing file. |
| ASSISTANT ADMINISTRATIVE OFFICER | Will scrutinize the proposal with all relevant facts and mark the file to Administrative Officer with a course of action to be adopted. |
| ADMINISTRATIVE OFFICER | Will suggest the suitability or other-wise of the course of action suggested, and define the same in the light of the existing provisions of Rules or Acts. |
| DEPUTY SECRETARY | Will decide on the course of action to be taken on a proposal. |

**4(b) (iv) The norms set by it for the discharge of its functions;**

| | |
|---|---|
| DALAYATH | Carrying out the functions entrusted to him the same day. |
| JUNIOR ASSISTANT | Carrying out the functions entrusted to him the same day. |
| CASE WORKER | Upto 5 days for submission of files/tappals (as per manual) |
| ASSISTANT ADMINISTRATIVE OFFICER | To attend to the work on priority and immediate basis. |
| ADMINISTRATIVE OFFICER | To attend to the work on priority and immediate basis. |
| DEPUTY SECRETARY TO GOVERNMENT D.P.A.R. (ADMINISTRATION) & STENOGRAPHERS & TYPISTS SELECTION AUTHORITY | To attend to the work on priority and immediate basis. |

**4(b) (v) The Rules, regulations, instructions, manuals and records, held by it or under its control or used by its employees for discharging its functions;**

**(a) RULES** : 1) Karnataka State Civil Services (General Recruitment) Rules, 1977.
2) Karnataka Civil Services (Recruitment to the post of Stenographers & Typists) Rules, 1983.

**(b) INSTRUCTIONS MANUALS & OTHERS** : 1) The Karnataka Government Secretariat Manual of Office Procedure.

**4(b) (vi) A statement of the categories of documents that are held by it or under its control;**

1) Register of Common Merit List of candidates for the posts of Stenographers and Typists.
2) Selection List of selected candidates for the posts of Stenographers and Typists.

**4(b) (vii) The particulars of any arrangement that exists for consultation with, or representation by the members of the public in relation to the formulation of its policy or implementation thereof;**

-NIL-

**4(b) (viii) A statement of the boards, councils, committees and other bodies consisting of two or more persons constituted as its part or for the purpose of its advice, and as to whether meetings of those boards councils, committees and other bodies are open to the public, or the minutes of such meetings are accessible for public;**

No Boards, Councils, Committees and other Bodies are constituted.

**4(b) (ix) A directory of its officers and employees;**

| SL. NO. | POST | NAME | TELEPHONE NO. |
|---|---|---|---|
| 1. | Dy. Secretary to Government D.P.A.R. (Administration) & Stenographers & Typists Selection Authority. | Ahmed A. Mokhtadar | 22256808 |
| 2. | Administrative Officer | K. Narayana | 22033969 |
| 3. | Asst. Administrative Officer | P.K. Badigannavar | 22033902 |
| 4. | Senior Assistant | R. Bhaskar | |
| 5. | Assistant-I | A. Krishnappa | |
| 6. | Assistant-II | Jone Prakash Rodrigues | |
| 7. | Stenographer | | |
| 8. | Senior Typist | K.N. Meenakshi | |
| 9. | Junior Assistant | | |
| 10. | Dalayath | B.C. Bhagyalakshmi | |

**4(b) (x) The monthly remuneration received by each of its officers and employees, including the system of compensation as provided in its regulations;**

| SL. NO. | POST | NAME | GROSS SALARY |
|---|---|---|---|
| 1. | Dy. Secretary to Government D.P.A.R. (Administration) & Stenographers & Typists Selection Authority. | Ahmed A. Mokhtadar | Rs. 21,158/- |
| 2. | Administrative Officer | K. Narayana | Rs.16,040/- |
| 3. | Asst. Administrative Officer | P.K. Badigannavar | Rs.15,680/- |
| 4. | Senior Assistant | R. Bhaskar | Rs.10,856/- |
| 5. | Assistant-I | A. Krishnappa | Rs. 8,860/- |
| 6. | Assistant-II | Jone Prakash Rodrigues | Rs. 8,006/- |
| 7. | Typist | K.N. Meenakshi | Rs. 7,751/- |
| 8. | Dalayath | B.C. Bhagyalakshmi | Rs. 6,850/- |

**4(b) (xi) The budget allocated to each of its agency, indicating the particulars of all plans, proposed expenditures and reports on disbursements made;**

No separate budget allocation has been made in respect of this Authority.

**4(b) (xii) The manner of execution of subsidy programmes, including the amounts allocated and the details of beneficiaries of such programmes;**

No subsidy programmes are implemented by the Authority.

**4(b) (xiii) Particulars of recipients of concessions, permits or authorisations granted by it;**

No concessions, permits or authorisations are granted by the Authority.

**4(b) (xiv) Details in respect of information, available to or held by it, reduced in an electronic form;**

- NIL -

**4(b) (xv) The particulars of facilities available to citizens for obtaining information, including the working hours of a library or reading room, if maintained for public use;**

No library or reading room is maintained by the Authority.

**4(b) (xvi) The names, designations and other particulars of the Public Information Officers;**

Sri K. Narayana, Administrative Officer, Stenographers & Typists Selection Authority,
V.V. Main Tower, 20th Floor, Dr. Ambedkar Veedhi, Bangalore-560 001.
Phone No. 22033969.

By Order and in the name of the Governor of Karnataka,

**K. NARAYANA**

P.R. 1623

Administrative Officer,
Stenographers & Typists Selection Authority.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳರವರ ನ್ಯಾಯಾಲಯ ಆದೇಶ**

**ಮುಟ್ಟುಗೋಲು ಆದೇಶ**

**ಸಂಖ್ಯೆ: ಅರಣ್ಯ/ಗುನ್ನೆ/ವಾಹನ/ಮುಟ್ಟುಗೋಲು/2005-06**

**ವಿಷಯ :** ಅನಧಿಕೃತವಾಗಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು.

ಅಕ್ರಮವಾಗಿ ಸಿಸಂ, ಶ್ರೀಗಂಧ ಹಾಗೂ ಸಾಗವಾನಿ ದಿಮ್ಮಿಗಳನ್ನು ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71(ಎ) ರಿಂದ (ಜಿ) ವರೆಗೆ ಅನುಗುಣವಾಗಿ ಈ ನ್ಯಾಯಾಲಯ ಪ್ರಾಧಿಕಾರದಿಂದ ಸಂಬಂಧಿಸಿದ ವಾಹನ ಮಾಲೀಕರಿಗೆ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನದಲ್ಲಿ ಇದ್ದ ಕಟ್ಟಿಗೆಯು ತಮ್ಮದೆಂದು ಸಾಧಿಸಲು ಅಧೀಕೃತ ದಾಖಲೆ ಪಾಸ ವ ಪರ್ಮಿಟ್ ಈ ನ್ಯಾಯಾಲಯದ ಮುಂದೆ ಹಾಜರುಪಡಿಸಲು ನೋಟೀಸು ನೀಡಲಾಗಿತ್ತು. ಅದರಂತೆ ಅ. ನಂ.1, 2ನೇದರ ವಾಹನ ವಾರಸುದಾರ ಈ ನ್ಯಾಯಾಲಯಕ್ಕೆ ವಾಹನವನ್ನು ಮಧ್ಯಂತರ ವಶಕ್ಕೆ ಬಿಡಲು ಮನವಿ ಸಲ್ಲಿಸಿದ್ದು ಈ ನ್ಯಾಯಾಲಯವು ಸದರಿಯವರ ವಾಹನಗಳ ಮನವಿಯನ್ನು ತಿರಸ್ಕೃತಗೊಳಿಸಿದ್ದು ಇರುತ್ತದೆ. ಸದರಿ ವಾಹನಗಳ ಮಾಲೀಕರಿಗೆ ಈ ನ್ಯಾಯಾಲಯದಿಂದ ನೋಟೀಸುಗಳನ್ನು ನೀಡಲಾಗಿದ್ದು ಇರುತ್ತದೆ. ಅದರಂತೆ ಅ.ನಂ.4, 5ನೇದರ ವಾಹನದ ವಾರಸುದಾರರ ವಿಳಾಸ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿತ್ತು. ಮತ್ತು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಸೂಚನೆ ಹೊರಡಿಸಲಾಗಿತ್ತು ಮತ್ತು ಪತ್ರಿಕೆಗಳಲ್ಲಿ ಪ್ರಕಟಿಸಲು ತಿಳಿಸಿದ್ದು ಇರುತ್ತದೆ. ರಾಜ್ಯ ಪತ್ರದಲ್ಲಿ ಮಾರ್ಚ್ 17, 2005ರ ಪ್ರಕಟಣೆಯಲ್ಲಿ ಪ್ರಕಟಣೆ ಹೊರಡಿಸಿರುತ್ತದೆ. ಅ.ನಂ. 6ನೇದಕ್ಕೆ ಸಂಬಂಧಿಸಿದ ವಾಹನ ಮಾಲೀಕರು ಸಲ್ಲಿಸಿದ ಮನವಿಯ ಮೇರೆಗೆ ಸಾಬೀತುಪಡಿಸಲು ಅನೇಕ ಬಾರಿ ನ್ಯಾಯಾಲಯದಿಂದ ನೋಟೀಸು ನೀಡಿದ್ದು ಸದರಿ ವಾಹನ ಮಾಲೀಕರು ಹಾಜರಾಗಿದ್ದು ಇರುವುದಿಲ್ಲ. ಅ.ನಂ. 7ನೇದರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು ಇರುತ್ತದೆ. ಆದ್ದರಿಂದ ಸದರ ವಾಹನಗಳು ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದಾಗಿ ಖಚಿತಗೊಂಡಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಈ ಕೆಳಕಂಡ ವಾಹನ ಮತ್ತು ಜಪ್ತಿ ಪಡಿಸಿದ ಅರಣ್ಯ ಉತ್ಪನ್ನವನ್ನು ಈ ಮೂಲಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದನ್ವಯ ಈ ಕೆಳಕಂಡ ವಾಹನ ಮತ್ತು ಜಪ್ತಿ ಪಡಿಸಿದ ಅರಣ್ಯ ಉತ್ಪನ್ನದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ ಯಾವುದೇ ರೀತಿಯ ಹಕ್ಕು (ಕರ್ನಾಟಕ ಸರ್ಕಾರ ಹೊರತುಪಡಿಸಿ) ಇರುವುದಿಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

| ಅ. ನಂ. | ವಾಹನ ವಿವರ | ಚೆಸ್ಸಿ ನಂ. | ಇಂಜಿನ್ ನಂಬರ್ | ವಾಹನದಲ್ಲಿ ವಶಪಡಿಸಿಕೊಂಡ ಅರಣ್ಯ ಉತ್ಪತ್ತಿ ವಿವರ |
|---|---|---|---|---|
| 1 | CNU/4040 Truck | ALEM 219924 | 483 ALEM 219924 | ಸಾಗ=20 ನಗ 5.185 ಘ.ಮೀ. |
| 2 | KA-30/2123 Truck | 360044 AUQ 102377 | 697024 AUQ 103528 | ಸಾಗ ನಗ 19=4.395 ಘ.ಮೀ. |
| 3 | KA-31/J-7043, Hero Honda Bick, | 00L20C 23891 | 00 L18 m 23985 | |
| 4 | ಸೂಜೂಕಿ ಮ್ಯಾಕ್ಸ್ KA-29/H-6286 | 1808 F 106240 | 1808m153555 | ಶ್ರೀಗಂಧದ ತುಂಡುಗಳು 6=7.000 ಕೆ.ಜಿ. |
| 5 | ಬಜಾಜ್ M-80 KA-23/E-8569 | - | 16E-93F-355740 | ಶ್ರೀಗಂಧದ ತುಂಡುಗಳು 6=5.000 ಕೆ.ಜಿ. |
| 6 | MEH-5998 Truck | ALEN-225147 | ALEN-100838 | ಬೆತ್ತ 6200 ಸಂ. |
| 7 | MYL-3725 ಫಿಯೇಟ್ ಕಾರ್ | - | - | ಶ್ರೀಗಂಧದ ತುಂಡುಗಳು |

ದಿನಾಂಕ: 21.10.2005 ರಂದು ಈ ನ್ಯಾಯಾಲಯದ ಮೊಹರಿನೊಂದಿಗೆ ಮತ್ತು ಸಹಿಯೊಂದಿಗೆ ಈ ಆದೇಶವನ್ನು ಬಿಡುಗಡೆ ಮಾಡಿರುತ್ತೇನೆ. ಈ ಆದೇಶವನ್ನು ಹೇಳಿ ಬರೆಯಿಸಿ ತಪ್ಪುಗಳನ್ನು ಸರಿಪಡಿಸಿ ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ವಾಹನದ ಮಾಲೀಕರು ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

ಪಿ.ಆರ್. 1632

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಡಿಬಿಸಿಎಂ:ಆರ್:ಸಿಬ್ಬಂದಿ:ಸಿಆರ್-44:2005-06, ದಿನಾಂಕ: 5ನೇ ಅಕ್ಟೋಬರ್ 2005**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಹಾಗೂ 2005ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56:ಯೋಮಸ-02(1) ದಿನಾಂಕ: 18.07.2002.

2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸು ಇಲಾಖೆ (ಜನಸ್ಪಂದನ ಕೋಶ) ಸಂಖ್ಯೆ: ಸಿಆಸುಇ 79 ಮೊಹಅ 2005, ದಿನಾಂಕ: 18.6.2005.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮ 2005 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಹಿಂದುಳಿದ ವರ್ಗಗಳ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ಜಿಲ್ಲಾ ಮಟ್ಟದಲ್ಲಿ | ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್. |
| ತಾಲ್ಲೂಕು ಮಟ್ಟದಲ್ಲಿ | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು | ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ಕಾಣಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

### 1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.

ಜಿಲ್ಲಾ ಹಂತದಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಕಛೇರಿಯು ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಛೇರಿ ಮೇಲ್ವಿಚಾರಕರು | 1 ಹುದ್ದೆ |
| 2) | ಪ್ರ.ದ.ಸ. | 2 ಹುದ್ದೆ |
| 3) | ದ್ವಿ.ದ.ಸ | 3 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ವಾಹನ ಚಾಲಕರು | 1 ಹುದ್ದೆ |
| 6) | 'ಡಿ' ಗ್ರೂಪ್ ನೌಕರರು | 1 ಹುದ್ದೆ |

**ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ತಿಳಿಸಿರುವಂತೆ ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಜಿಲ್ಲಾವಲಯದಲ್ಲಿ ಸಂಬಂಧಿಸಿದ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

### 1) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳು:

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಅಂಶವಾರು ಮಾಹಿತಿ.

ಹಿಂದುಳಿದ ವರ್ಗಗಳ ಇಲಾಖೆಯ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಕಾರ್ಯ ಕ್ರಮಗಳ ಮೇಲ್ವಿಚಾರಣೆ 'ಡಿ' ಗ್ರೂಪ್ ನೌಕರರ ನೇಮಕಾತಿ ಪ್ರಾಧಿಕಾರ, ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ ಬಗ್ಗೆ ತಪಾಸಣೆ, ಘಟಕ ಕಛೇರಿಗಳ ತಪಾಸಣೆ, ವಸತಿನಿಲಯಗಳ ತಪಾಸಣೆ, ಇಲಾಖೆಯ ಇತರೆ ಸಂಸ್ಥೆಗಳ ತಪಾಸಣೆ, ಇತ್ಯಾದಿ ಕಾರ್ಯಕ್ರಮಗಳ ಮೇಲ್ವಿಚಾರಣೆ ಮತ್ತು ಸಕ್ಷಮ ಪ್ರಾಧಿಕಾರಿಯಾಗಿ ರಾಜ್ಯವಲಯ ಕಾರ್ಯಕ್ರಮಗಳಾದ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ಶಿಷ್ಯವೇತನ ಮಂಜೂರಾತಿಗೆ ಸಂಬಂಧಪಟ್ಟಂತೆ ಜಿಲ್ಲಾಧಿಕಾರಿಗಳ ಅಧೀನದಲ್ಲಿ ಮತ್ತು ಜಿಲ್ಲಾವಲಯ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅಧೀನದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಸಕ್ಷಮ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾರೆ.

### 2) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ

ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು, ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಮೇಲ್ವಿಚಾರಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**3) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಂತೆ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗಿರುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಮೇಲ್ವಿಚಾರಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ ಕೈಗೊಳ್ಳುವುದು.

4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.

5) ಸರ್ಕಾರವು : ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.

6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

   1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

   2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸುವುದು.

   3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರು ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಯಾಗಿ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

   4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥ ಕಾರ್ಯ ಪಟ್ಟಿಮಾಡಿ ಪ್ರಕಟಿಸಿದೆ.

**ಈ ಕಛೇರಿಯ ಅಧೀನದಡಿಯಲ್ಲಿ ಬರುವ ಸಂಸ್ಥೆಗಳ ವಿವರ ಕೆಳಕಂಡಂತಿದೆ:**

1) ವಿದ್ಯಾರ್ಥಿನಿಲಯಗಳು (ಮೆಟ್ರಿಕ್ ಪೂರ್ವ : ಮೆಟ್ರಿಕ್ ನಂತರ)

2) ಆಶ್ರಮಶಾಲೆಗಳು

3) ಹೊಲಿಗೆ ತರಬೇತಿ ಕೇಂದ್ರಗಳು

4) ನವೋದಯ ಮಾದರಿ ವಸತಿ ಶಾಲೆ

5) ಖಾಸಗಿ ವಿದ್ಯಾರ್ಥಿನಿಲಯಗಳು

6) ಖಾಸಗಿ ಅನಾಥಾಲಯಗಳು

**ಇಲಾಖೆವತಿಯಿಂದ ದೊರೆಯುವ ಸೌಲಭ್ಯಗಳು:**

ತಾಲ್ಲೂಕು ಮಟ್ಟದಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾ ಅಧಿಕಾರಿಯವರು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಯವರ ಅಧೀನದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. ಇವರು ತಾಲ್ಲೂಕಿನಲ್ಲಿರುವ ಇಲಾಖಾ ವಿದ್ಯಾರ್ಥಿನಿಲಯಗಳು, ಅನಾಥಾಲಯಗಳು, ಘಟಕ ಕಛೇರಿಗಳ ತಪಾಸಣೆ ಮತ್ತು ಆಶ್ರಮಶಾಲೆಗಳ ತಪಾಸಣಾ ಕಾರ್ಯವನ್ನು ಮಾಡುವುದು ಮತ್ತು ಆಗಿಂದಾಗ್ಗೆ ಬರುವ ಸಮಸ್ಯೆಗಳನ್ನು ಬಗೆಹರಿಸುತ್ತಾರೆ. ಹಾಗೂ ವಿದ್ಯಾರ್ಥಿವೇತನ, ಹೆಚ್ಚುವರಿ ಭೋಜನ ವೆಚ್ಚಗಳನ್ನು ಮಂಜೂರು ಮಾಡುತ್ತಾರೆ.

1) ಹೊಲಿಗೆ ತರಬೇತಿ ಕೇಂದ್ರಗಳು

2) ಕಾನೂನು ಪದವೀಧರರಿಗೆ ಧನಸಹಾಯ

3) ಮೆಟ್ರಿಕ್ ಪೂರ್ವ : ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ

4) ಖಾಸಗಿ ಅನುದಾನಿತ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ

5) ಖಾಸಗಿ ಅನುದಾನಿತ ಅನಾಥಾಲಯಗಳಿಗೆ ಸಹಾಯಧನ

6) ಮೆಟ್ರಿಕ್ ಪೂರ್ವ : ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ

7) ವರ್ಗ-1ರ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ

8) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಾತಿ ಪರಿಶೀಲಿಸಿ ಅರ್ಹರಾದವರಿಗೆ ಸಿಂಧುತ್ವ ಪ್ರಮಾಣ ಪತ್ರ.

9) ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ

10) ವರ್ಗ-1 ಹಾಗೂ ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ.

11) ವೃತ್ತಿಪರ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ.

12) ಆಶ್ರಮ ಶಾಲೆಗಳು : ವಸತಿ ಶಾಲೆಗಳು.

13) ಶ್ರಮಶಕ್ತಿ ಯೋಜನೆಯಡಿಯಲ್ಲಿ ಸಾಂಪ್ರದಾಯಿಕ ಕುಶಲಕರ್ಮಿಗಳಿಗೆ ಸಾಲ ಮಂಜೂರಾತಿ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 1633

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

## ಅಧಿಸೂಚನೆ

**ಸಂಖ್ಯೆ: ಜಿ.ಸ.ಕ.ಆ.ಉ:ಎಸ್:2:ಸಿಆರ್:39:2005-06, ದಿನಾಂಕ: 17ನೇ ಅಕ್ಟೋಬರ್ 2005**

**ವಿಷಯ :** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ) ಜಾರಿಗೆ ತರುವ ವಿಚಾರ.

**ಉಲ್ಲೇಖ :** ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರುರವರ ಅಧಿಸೂಚನೆ ಸಂಖ್ಯೆ: ಸಕನಿ:ಸಿಬ್ಬಂದಿ:ಸಿಆರ್:2005-06, ದಿನಾಂಕ: 21.09.2005.

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರ ಅಧಿನಿಯಮ 22ರ 2005) ರನ್ವಯ ಸೆಕ್ಷನ್ 5(1) 5(2) ಮತ್ತು 19(1) ರಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| **ಜಿಲ್ಲಾ ಮಟ್ಟದಲ್ಲಿ:** | |
|---|---|
| ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಉಡುಪಿ ಜಿಲ್ಲೆ | "ಸಾರ್ವಜನಿಕ ಮಾಹಿತಿ ಅಧಿಕಾರಿ" |
| ಅಧೀಕ್ಷಕರು, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಉಡುಪಿ | "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" |
| ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ | "ಮೇಲ್ಮನವಿ ಪ್ರಾಧಿಕಾರ" |
| **ತಾಲ್ಲೂಕು ಮಟ್ಟದಲ್ಲಿ:** | |
| ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು | "ಸಾರ್ವಜನಿಕ ಮಾಹಿತಿ ಅಧಿಕಾರಿ" |
| ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯ ಅಧೀಕ್ಷಕರುಗಳು | "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" |
| ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಉಡುಪಿ ಜಿಲ್ಲೆ | "ಮೇಲ್ಮನವಿ ಪ್ರಾಧಿಕಾರ" |

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಜಿಲ್ಲಾ ಹಂತದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ಜಿಲ್ಲಾ ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 2 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 2 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ವಾಹನ ಚಾಲಕರು | 1 ಹುದ್ದೆ |
| 6) | 'ಡಿ' ಗ್ರೂಪ್ ನೌಕರರು | 2 ಹುದ್ದೆ |

**ವಿದ್ಯಾರ್ಥಿ ನಿಲಯಗಳ ವಿವರ:**

| ಕ್ರ.ಸಂ. | ಸಂಸ್ಥೆಯ ಹೆಸರು |
|---|---|
| | **ಉಡುಪಿ ತಾಲ್ಲೂಕು** |
| 1 | ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯ, ಬನ್ನಂಜೆ, ಉಡುಪಿ. |
| 2 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಬನ್ನಂಜೆ, ಉಡುಪಿ |
| 3 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಕಾಪು. |
| 4 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಯಡ್ತಾಡಿ. |
| 5 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಕೂರಾಡಿ. |
| 6 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಕೂರಾಡಿ. |
| 7 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಪಡುಬಿದ್ರೆ. |
| 8 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಯಡ್ತಾಡಿ. |
| 9 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಕುಂಜಿಬೆಟ್ಟು. |
| 10 | ಮಹಿಳಾ ಕಲ್ಯಾಣ ಕೇಂದ್ರ, ಬನ್ನಂಜೆ. |
| 11 | ಮಹಿಳಾ ಕಲ್ಯಾಣ ಕೇಂದ್ರ, ನೇಜಾರು |
| 12 | ಮಹಿಳಾ ಕಲ್ಯಾಣ ಕೇಂದ್ರ, ಪಡುಬಿದ್ರೆ |
| 13 | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಬ್ರಹ್ಮಾವರ. |
| | **ಕಾರ್ಕಳ ತಾಲ್ಲೂಕು** |
| 14 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಹೆಬ್ರಿ. |
| 15 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಬಜೆಗೋಳಿ. |
| 16 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಮುನಿಯಾಲು. |

| ಕ್ರ.ಸಂ. | ಸಂಸ್ಥೆಯ ಹೆಸರು |
|---|---|
| 17 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ನಿಟ್ಟೆ. |
| 18 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಕಾರ್ಕಳ. |
| | **ಕುಂದಾಪುರ ತಾಲ್ಲೂಕು** |
| 19 | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಕುಂದಾಪುರ. |
| 20 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಕುಂದಾಪುರ. |
| 21 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಬೈಂದೂರು. |
| 22 | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಅಂಪಾರು. |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದಲ್ಲಿ ಪರಿಶಿಷ್ಟ ಜಾತಿಯವರ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾಲೇಜು ವಿದ್ಯಾರ್ಥಿ ನಿಲಯಗಳು.
2. ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು.
3. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು.
4. ಭಾರತ ಸರ್ಕಾರದ ಮೆಟ್ರಿಕ್ ನಂತರದ / ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.
5. ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳಿಗೆ ಪುಸ್ತಕ ಭಂಡಾರ.
6. ಅಧ್ಯಯನ ಪ್ರವಾಸಕ್ಕೆ ನೆರವು.
7. 1 ರಿಂದ 5ನೇ ತರಗತಿವರೆಗೆ ವಿದ್ಯಾರ್ಥಿ ವೇತನ.
8. ಕಾಲೇಜು ವಿದ್ಯಾರ್ಥಿಗಳಿಗೆ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ.
9. ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
10. ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
11. ಪ್ರತಿಭಾ ವಿದ್ಯಾರ್ಥಿ ವೇತನ ನೀಡಿಕೆ
12. ಅಶುದ್ಧ ವೃತ್ತಿಯಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
13. ಮೆಟ್ರಿಕ್ ಪೂರ್ವ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹಧನ
14. ಅಂತರ್‌ಜಾತಿ ವಿವಾಹ ಪ್ರೋತ್ಸಾಹಧನ
15. ದೌರ್ಜನ್ಯವಾಗಿ ನೊಂದವರಿಗೆ ಪರಿಹಾರಧನ
16. ಮಹಿಳಾ ಕಲ್ಯಾಣ ಕೇಂದ್ರ
17. ಕಾನೂನು ಪದವೀಧರರಿಗೆ ಶಿಷ್ಯವೇತನ.
18. ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರೀಯ ನೆರವು.
19. ಸ್ವಯಂ ಉದ್ಯೋಗಕ್ಕಾಗಿ ಸಹಾಯಧನ
20. ಒಂದು ವರ್ಷದ ಕಂಪ್ಯೂಟರ್ ತರಬೇತಿ
21. ಆರು ತಿಂಗಳ ವಿವಿಧ ವೃತ್ತಿಪರ ತರಬೇತಿ
22. ವೈದ್ಯಕೀಯ ಮತ್ತು ಇಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಶುಲ್ಕ ಮರು ಪಾವತಿ.

**1. ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಸಮಾಜ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಜಿಲ್ಲಾ ವಲಯದಲ್ಲಿ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

1. **ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು:** ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು. ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು, ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು / ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. 2005ರ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ಶಿಕ್ಷಣ) ರವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಮುಖ್ಯ ಲೆಕ್ಕಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆ ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ", ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯ ಅಧೀಕ್ಷಕರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿರವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿರವರ ಕಛೇರಿಯ ಅಧೀಕ್ಷಕರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಯನ್ನಾಗಿ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗಧಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 1634 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಗದಗ್ ಜಿಲ್ಲೆ**

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ, ಕಾರ್ಯಾಲಯ, ಗದಗ್.**

**ಅಧಿಸೂಚನೆ**

**ಸಂಖ್ಯೆ: ಜಿಸಕಅ:ಎಡಿಎಂ:ಎಸ್-1:ಸಿಆರ್-21:2004-05/488, ದಿನಾಂಕ: 22ನೇ ಸೆಪ್ಟೆಂಬರ್ 2005**

**ವಿಷಯ :** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ) ಜಾರಿಗೆ ತರುವ ಕುರಿತು.

**ಉಲ್ಲೇಖ :** ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ: 22)

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯುವ ಅವಕಾಶದ ಹಕ್ಕಿಗಾಗಿ ಒಂದು ಶಾಸನವನ್ನು ರಚಿಸುವುದು ಅಗತ್ಯವೆಂದು ಮನಗಂಡು "ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005" (2005ರ ಕೇಂದ್ರ ಕಾಯ್ದೆ ಸಂಖ್ಯೆ 22)ನ್ನು ಜಾರಿಗೊಳಿಸಲಾಗಿದೆ. ಈ ಅಧಿನಿಯಮದ ಪ್ರಕಾರ ಆಯಾ ಕಛೇರಿ : ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳೆಂದು ಗುರುತಿಸಿ ಸದರಿ ಅಧಿನಿಯಮ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಯಾ ಕಛೇರಿ : ಸಂಸ್ಥೆಗಳಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 5(2)ರ ಅಡಿಯಲ್ಲಿ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಬೇಕಾಗಿದೆ.

ಅದರಂತೆ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ ಸಂಸ್ಥೆಗಳನ್ನು ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಸೆಕ್ಷನ್ 2(4) ರನ್ವಯ "ಸಾರ್ವಜನಿಕ ಪ್ರಾಧಿಕಾರಿ" ಎಂದು ಗುರುತಿಸಬೇಕಾಗಿದೆ ಸದರಿ ಸಂಸ್ಥೆಗಳಲ್ಲಿ "ಸಾರ್ವಜನಿಕ ಮಾಹಿತಿ ಪ್ರಾಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಗಳನ್ನು ಗುರುತಿಸಲಾಗಿದೆ. ಅದೇ ರೀತಿ ಅಧಿನಿಯಮದ ಸೆಕ್ಷನ್ 19(1)ರ ಅಡಿಯಲ್ಲಿ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಆಯಾ ಸಂಸ್ಥೆಗಳಲ್ಲಿ ಮೇಲ್ಮನವಿ ಪ್ರಾಧಿಕಾರಿ ಎಂದು ಗುರುತಿಸಲಾಗಿದೆ.

| ಕ್ರ. ಸಂ. | ಸಂಸ್ಥೆಗಳು (ಸಾರ್ವಜನಿಕ ಪ್ರಾಧಿಕಾರ) | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1) | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಗದಗ್. | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು | ಕಛೇರಿ ಅಧೀಕ್ಷಕರು | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿ.ಪಂ. ಗದಗ್. |
| 2) | ಜಿಲ್ಲೆಯ ಎಲ್ಲಾ ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗಳು | ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳು | ಆಯಾ ಕಛೇರಿ, ಅಧೀಕ್ಷಕರು | ಆಯಾ ತಾಲ್ಲೂಕಿನ ತಾಲ್ಲೂಕ ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳು. |

ಜಿಲ್ಲಾ ಮಟ್ಟದಲ್ಲಿ ಸಮಾಜ ಕಲ್ಯಾಣ ಇಲಾಖೆ ಹಲವಾರು ಕಾರ್ಯಕ್ರಮಗಳನ್ನು ಜಿಲ್ಲಾ ಪಂಚಾಯತ್ ಮೂಲಕ ಕಾರ್ಯಗತ ಮಾಡಲಾಗುತ್ತಿದೆ. ಈ ಕಾರ್ಯಕ್ರಮ ಅನುಷ್ಠಾನದಲ್ಲಿ ನೆರವು ನೀಡಲು ಪ್ರತಿ ಜಿಲ್ಲೆಗೆ ಒಬ್ಬ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಗೂ ಇತರೆ ಸಿಬ್ಬಂದಿ ವರ್ಗದವರು ಇರುತ್ತಾರೆ. ವಿವರ ಈ ಕೆಳಗಿನಂತಿರುತ್ತದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 2 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಕ್ಲರ್ಕ್ ಕಮ್-ಟೈಪಿಸ್ಟ್ | 1 ಹುದ್ದೆ |
| 6) | ದ್ವಿತೀಯ ದರ್ಜೆ ಸಹಾಯಕ | 1 ಹುದ್ದೆ |
| 7) | ವಾಹನ ಚಾಲಕರು | 1 ಹುದ್ದೆ |
| 8) | 'ಡಿ' ಗ್ರೂಪ್ ನೌಕರರು | 2 ಹುದ್ದೆ |

ಇವರು ಎಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿರುತ್ತಾರೆ.

ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ರವರು ಇಲಾಖಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರುತ್ತಾರೆ. ಇವರಿಗೆ ಸಹಾಯ ಮಾಡಲು ಕಛೇರಿ ಅಧೀಕ್ಷಕರು ಹಾಗೂ ಇನ್ನಿತರೆ ಸಿಬ್ಬಂದಿಯವರು ಇರುತ್ತಾರೆ.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಡಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರ:**

| | | |
|---|---|---|
| 1) | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯಗಳು | 22 |
| 2) | ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯಗಳು | 5 |
| 3) | ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯಗಳು | 6 |
| 4) | ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯಗಳು | 2 |
| 5) | ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು | 3 |
| 6) | ಹೊಲಿಗೆ ತರಬೇತಿ ಕೇಂದ್ರ | 1 |
| 7) | ಮಹಿಳಾ ಕಲ್ಯಾಣ ಕೇಂದ್ರಗಳು | 11 |
| 8) | ಆಶ್ರಮ ಶಾಲೆ : ನಿವಾಸಿ ಶಾಲೆಗಳು | 3 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ವಸತಿ ಶಾಲೆಗಳು
2) ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನಸಹಾಯ
3) ಕಾಲೇಜು ವಿದ್ಯಾರ್ಥಿನಿಲಯಗಳು
4) ಮುರಾರ್ಜಿ ದೇಸಾಯಿ ವಸತಿ ಶಾಲೆಗಳು
5) ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
6) ಪುಸ್ತಕ ಭಂಡಾರ
7) 1 ರಿಂದ 5ನೇ ತರಗತಿವರೆಗೆ ವಿದ್ಯಾರ್ಥಿ ವೇತನ
8) ಮಹಿಳೆಯರಿಗೆ ತರಬೇತಿ ಕೇಂದ್ರ
9) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಜನರಿಗಾಗಿ ವಿದ್ಯಾರ್ಥಿನಿಲಯಗಳ ನಿರ್ಮಾಣ
10) ನಿಮ್ಮ ವರ್ಗದ ವಿದ್ಯಾರ್ಥಿ ನಿಲಯಗಳು
11) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
12) ಸ್ವಯಂ ಉದ್ಯೋಗಕ್ಕೆ ತರಬೇತಿ ಕೇಂದ್ರ
13) ಕಾನೂನು ಪದವೀಧರರಿಗೆ ಶಿಷ್ಯ ವೇತನ
14) ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರಿಯ ನೆರವು
15) ಅಂಬೇಡ್ಕರ್ ವಸತಿ ಯೋಜನೆ
16) ಆಶ್ರಯ ವಸತಿ ಯೋಜನೆ
17) ಅಂತರಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹಧನ.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸುವಂತೆ ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಜಿಲ್ಲಾ ವಲಯದಲ್ಲಿ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

1) ಜಿಲ್ಲಾಧಿಕಾರಿಗಳ ಕಾರ್ಯ ಸಹಾಯಕರಾಗಿ ಸಮಾಜ ಕಲ್ಯಾಣ ಇಲಾಖೆಯ ವಿಷಯಗಳ ಬಗ್ಗೆ ಕಾರ್ಯನಿರ್ವಹಿಸುವುದು.
2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಗದಗ್‌ರವರ ಕಾರ್ಯಸಹಾಯಕರಾಗಿ ಸಮಾಜ ಕಲ್ಯಾಣ ಇಲಾಖೆಯ ವಿಷಯಗಳ ಬಗ್ಗೆ ಕಾರ್ಯನಿರ್ವಹಿಸುವುದು.
3) ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರಿಗೆ ಜಿಲ್ಲಾ ಮಟ್ಟದಲ್ಲಿ ಜರುಗುವ ಸಭೆಗೆ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟ ವಿಷಯಗಳ ಮೇಲೆ ಮಾಹಿತಿ ಒದಗಿಸಿ ಸಹಕರಿಸುವುದು.
4) ಸಮಾಜ ಕಲ್ಯಾಣ ಹಾಗೂ ಹಿಂದುಳಿದ ಜಾತಿ ಮತ್ತು ಅಲ್ಪ ಸಂಖ್ಯಾತರ ಇಲಾಖೆಗೆ ಸಹ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
5) ಪ.ಜಾತಿ : ಪ.ವರ್ಗಗಳ ನಿಮ್ನ ವರ್ಗಗಳ ಕಲ್ಯಾಣಕ್ಕಾಗಿ ಯೋಜನೆಗಳನ್ನು ತಯಾರಿಸಿ ಆಯುಕ್ತರು, ನಿರ್ದೇಶಕರುಗಳಿಗೆ ಸಲ್ಲಿಸುವುದು.
6) ಈ ಮೇಲಿನ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ, ತಿಂಗಳಲ್ಲಿ ಕನಿಷ್ಠ 15 ದಿವಸ ಪ್ರವಾಸ ಕೈಗೊಳ್ಳುವುದು ಹಾಗೂ ಕನಿಷ್ಠ 10 ರಾತ್ರಿ ವಾಸ್ತವ್ಯ ಮಾಡುವುದು.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಹೆಚ್ಚಿನ ಕರ್ತವ್ಯಗಳು:**

1. ಪೊಲೀಸ್ ಇಲಾಖೆಯೊಂದಿಗೆ ದೌರ್ಜನ್ಯ ಪ್ರಕರಣಗಳಿಗೆ ಸಂಬಂಧಿಸಿದಂತೆ ಸಹಯೋಗದೊಂದಿಗೆ ಪ್ರಕರಣಗಳನ್ನು ದಾಖಲ್‌ಮಾಡುವುದು.
2. ಜಿಲ್ಲೆಯ ಎಲ್ಲಾ ಹಳ್ಳಿಗಳಲ್ಲಿ ವರ್ಷದಲ್ಲಿ ಕನಿಷ್ಠ ಪಕ್ಷ ಒಮ್ಮೆ ಪ್ರವಾಸ ಕೈಗೊಳ್ಳುವುದು.
3. ಭಾರತ ಸರ್ಕಾರದವರು ಕೇಳಿದ ಮಾಹಿತಿಯನ್ನು 5 ದಿನಗಳಲ್ಲಿ ಕಳುಹಿಸುವುದು.
4. ಕರ್ನಾಟಕ ಸರ್ಕಾರದವರು ಕೇಳುವ ಮಾಹಿತಿಯನ್ನು 10 ದಿನಗಳಲ್ಲಿ ಕಳುಹಿಸುವುದು.
5. ಸಮಾಜ ಕಲ್ಯಾಣ ಇಲಾಖೆಯ ಶೇಕಡಾ 50 ರಷ್ಟು ಸಂಸ್ಥೆಗಳಿಗೆ ಭೇಟಿನೀಡಿ ತಪಾಸಣೆ ಮಾಡಿ ಮಾಸಿಕ ವರದಿಯನ್ನು ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ನಿರ್ದೇಶಕರು ಪ.ವರ್ಗಗಳ ಕಲ್ಯಾಣ ಇಲಾಖೆ ಬೆಂಗಳೂರು ರವರಿಗೆ ಸಲ್ಲಿಸಲಾಗುವುದು.
6. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಇತರ ನೋಡಲ್ ಅಧಿಕಾರಿಗಳು ಇಲಾಖೆಯ ಸಂಸ್ಥೆಗಳಿಗೆ ಭೇಟಿ ನೀಡಿ ಕಳುಹಿಸಿದ ತಪಾಸಣಾ ವರದಿಗಳನ್ನು ಮೇಲೆ ಅನುಪಾಲನಾ ವರದಿಯನ್ನು ಸಲ್ಲಿಸುವುದು.
7. ಜಿಲ್ಲಾ ಮಟ್ಟದಲ್ಲಿರುವ ಸಮಾಜ ಕಲ್ಯಾಣ ಇಲಾಖೆ ಎಲ್ಲಾ ಸಂಸ್ಥೆಗಳು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ನೇರ ನಿಯಂತ್ರಣಗಳಲ್ಲಿ ಬರುವುವು.
8. ಹಿಂದುಳಿದ ವರ್ಗಗಳ ಅಂಕಿ ಸಂಖ್ಯೆಗಳನ್ನು ಸಂಗ್ರಹಿಸುವುದು.
9. ಜಿಲ್ಲಾ ಮಟ್ಟದಲ್ಲಿ ಜರುಗುವ ಇಲಾಖೆಗೆ ಸಂಬಂಧಪಟ್ಟ ಸದಸ್ಯತ್ವ ಹೊಂದಿದ ಸಭೆಗಳಲ್ಲಿ ಭಾಗವಹಿಸುವುದು.
10. ತಾಲ್ಲೂಕಿನಲ್ಲಿ ಪ್ರವಾಸ ಕೈಗೊಂಡಾಗ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕಾ ಪಂಚಾಯತ್ ಕಾರ್ಯದರ್ಶಿ ಗ್ರಾಮ ಪಂಚಾಯತ್‌ಗಳಿಗೆ ಭೇಟಿ ನೀಡಿ ಪರಿಶಿಷ್ಟ ಜಾತಿ ಪ.ವರ್ಗದವರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ವಿಮರ್ಶಿಸಿ ಉತ್ತಮ ಪ್ರಗತಿ ಸಾಧಿಸುವಲ್ಲಿ ಸಹಕರಿಸುವುದು.
11. ಪ್ರತಿ ತಿಂಗಳು ಸಾದಿಲ್ವಾರು, ಬಿಲ್ಲುಗಳನ್ನು ಕಾರ್ಯಗತಗೊಳಿಸಿ ಮಾಸಿಕ ವೆಚ್ಚದ ಪತ್ರಿಕೆಯನ್ನು ಸಲ್ಲಿಸುವುದು.
12. ಇಲಾಖೆಯ ವಿವಿಧ ಯೋಜನೆಗಳ ಅನುಷ್ಠಾನ ಹಾಗೂ ವೆಚ್ಚದ ಬಗ್ಗೆ ನಿಗಾವಹಿಸಿ ಸಮರ್ಪಕವಾಗಿ ಯೋಜನೆಗಳು ಅನುಷ್ಠಾನಗೊಳ್ಳುವಂತೆ ಕ್ರಮವಹಿಸುವುದು ಮತ್ತು ಕಾರ್ಯಗತವಾಗದೆ ಇದ್ದಂತೆ ಯೋಜನೆಗಳನ್ನು ಮರು ಒಪ್ಪಿಸುವುದು.
13. ಪ.ಜಾತಿ : ಪ. ವರ್ಗದ ವಿದ್ಯಾರ್ಥಿಗಳಿಗೆ ಶಿಕ್ಷಣ ಸೌಲಭ್ಯ ಹಾಗೂ ವಸತಿ ನಿಲಯಗಳಲ್ಲಿ ಸ್ಥಳಾವಕಾಶ ದೊರೆಯುವಲ್ಲಿ ಸಹಕರಿಸುವುದು.
14. ಜಿಲ್ಲಾ ಮಟ್ಟದಲ್ಲಿ ಎಲ್ಲಾ ಅಭಿವೃದ್ಧಿ ಅಧಿಕಾರಿಗಳನ್ನು ಸಂಪರ್ಕಿಸಿ ಯೋಜನೆಗಳಲ್ಲಿ ಶೇ.18ರ ಪ.ಜಾತಿಯವರ ಕಲ್ಯಾಣಕ್ಕಾಗಿ ಮೀಸಲಿರಿಸಿದ್ದನ್ನು ಪರಿಶೀಲಿಸುವುದು.
15. ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಅನುದಾನ ನೀಡುವ ಅನುದಾನಿತ ಸಂಸ್ಥೆಗಳಿಗೆ ಭೇಟಿ ನೀಡಿ ತಪಾಸಣೆ ಕೈಗೊಳ್ಳುವುದು.
16. ನಿರ್ದೇಶಕರು ಕಾಲಕಾಲಕ್ಕೆ ವಹಿಸುವ ಇತರೆ ಯಾವುದಾದರೂ ಕೆಲಸ ನಿರ್ವಹಿಸುವುದು.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**4. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖೆ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು : ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

5. **ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**
   1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
   2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
   3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಫ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
   4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 1635 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಗದಗ್.

**STATE ELECTION COMMISSION, KARNATAKA**

**K.S.C.M.F. Building (Annexe), No.8, 1st Floor, Cunnigham Road, Bangalore-560 052**

**NOTIFICATION**

**No. SEC 19 EST 2005, Dated: 27th October 2005**

In exercise of the powers conferred by sub section (1) of section 5 of the Right to Information Act, 2005 (Central Act 22/2005), the State Election Commission, Karnataka being the Public authority hereby designate the Under Secretary-1, State Election Commission, Karnataka to be the State Public Information Officer in respect of the office of the State Election Commission, Karnataka.

Commissioner,

P.R. 1637 State Election Commission, Karnataka.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 562 ಡಿಪಿಐ 2004, ದಿನಾಂಕ: 30ನೇ ಸೆಪ್ಟೆಂಬರ್ 2005**

ಪದವಿ ಪೂರ್ವ ಶಿಕ್ಷಣ ಇಲಾಖೆಯು, ಸರ್ಕಾರಿ ಪದವಿ ಪೂರ್ವ ಕಾಲೇಜು, ಗುರುಮಿಟಕಲ್, ಗುಲ್ಬರ್ಗಾ ಜಿಲ್ಲೆ, ಇಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ.ಬಿ. ಅಂಗಡಿ, ಇವರಿಗೆ ಪದವಿ ಪೂರ್ವ ಶಿಕ್ಷಣ ಇಲಾಖೆಯ ವೇತನ ಶ್ರೇಣಿ ರೂ.9580-14200ರ ಉಪ ನಿರ್ದೇಶಕರ ವೃಂದದ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ವೃತ್ತಿ ಶಿಕ್ಷಣ ಇಲಾಖೆ, ಬೆಂಗಳೂರು, ಇಲ್ಲಿ ಖಾಲಿ ಇರುವ ಉಪ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1638 **ಸ್ವರ್ಣಲತಾ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**DEPARTMENT OF PERSONNEL & ADMINISTRATIVE REFORMS**

**NOTIFICATION**

**No. DPAR 353 SAS 2005, Bangalore, Dated: 22nd October 2005**

The Secretary to Government, Finance Department, Bangalore (Sri D.N. Narasimha Raju, IAS) is placed in additional charge of Secretary, 5th State Pay Commission, Government of Karnataka, Bangalore until further orders.

By Order and in the name of the Governor of Karnataka

P.R. 1639 **K. SUDHAKARA SHETTY**

Under Secretary to Government, DPAR (Services-1).

**DEPARTMENT OF PERSONNEL & ADMINISTRATIVE REFORMS**

**NOTIFICATION**

**No. DPAR 173 SPS 2005, Bangalore, Dated: 24th October 2005**

The orders issued in Notification No. DPAR 173 SPS 2005, dated: 7.10.2005 posting Shri Sanjay Vir Singh IPS (KN-89), as Deputy Inspector General of Police and Commander, Anti Naxalite Force, Udupi stands cancelled and he is continued as Deputy Inspector General of Police, COD, Bangalore until further orders.

By Order and in the name of the Governor of Karnataka

P.R. 1640 **K. SUDHAKARA SHETTY**

Under Secretary to Government, DPAR (Services-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
## ಅಧಿಸೂಚನೆ

**ಸಂಖ್ಯೆ: ಸಿಆಸುಇ 416 ಸೇಅಸೆ 2005, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2005**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಬೆಂಗಳೂರು ರವರನ್ನು ಸರ್ಕಾರದ ಕಾರ್ಯದರ್ಶಿ (ತೋಟಗಾರಿಕೆ) ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1641

**ಕೆ. ಸುಧಾಕರಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

## ಸಹಕಾರ ಇಲಾಖೆ
### ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ

| ಅರ್ಜಿದಾರರು | ಎದುರು ಅರ್ಜಿದಾರರು |
|---|---|
| **ಸಂಕೀರ್ಣ ದಾವಾ ನಂ.220:04-05** | |
| ಪ್ರಭಾರ ವ್ಯವಸ್ಥಾಪಕರು,<br>ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),<br>ಬಿ. ಬೀರನಹಳ್ಳಿ, ಶಿವಮೊಗ್ಗ ತಾಲ್ಲೂಕು. | ಹೆಚ್. ನಾಗಯ್ಯ, ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ.ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.221:04-05** | |
| - ” - | ಹೆಚ್.ಎನ್. ಚಿದಾನಂದಮೂರ್ತಿ ಬಿನ್ ಹೆಚ್. ನಾಗಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.222:04-05** | |
| - ” - | ಹೆಚ್.ಎನ್. ಸುರೇಶ್ ಬಿನ್ ಹೆಚ್. ನಾಗಯ್ಯ (ಬೆಳಗಲು),<br>ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.223:04-05** | |
| - ” - | ನಾಗರತ್ನಮ್ಮ ಕೋಂ ಹೆಚ್. ನಾಗಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.224:04-05** | |
| - ” - | ಹೆಚ್. ವೀರಭದ್ರಯ್ಯ ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.225:04-05** | |
| - ” - | ಹೆಚ್. ಭದ್ರಯ್ಯ ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.226:04-05** | |
| - ” - | ಹೆಚ್. ಚಂದ್ರಯ್ಯ ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.227:04-05** | |
| - ” - | ಚನ್ನಬಸಯ್ಯ ಬಿನ್ ಭದ್ರಯ್ಯ (ಮೃತ)<br>ವಾರಸುದಾರರು: 1) ಹೆಚ್. ನಾಗಯ್ಯ ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು.<br>2) ಹೆಚ್. ಚಂದ್ರಯ್ಯ, ಬಿನ್ ಚನ್ನಬಸಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.228:04-05** | |
| - ” - | ದ್ರಾಕ್ಷಾಯಣಮ್ಮ ಕೋಂ ಚಂದ್ರಯ್ಯ,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು. |
| **ಸಂಕೀರ್ಣ ದಾವಾ ನಂ.229:04-05** | |
| - ” - | ಹೆಚ್.ಎನ್. ಪುಷ್ಪ ಕೋಂ ಹೆಚ್.ಎನ್. ಸುರೇಶ್,<br>ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು. |

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕ್ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಮೇಲ್ಕಂಡ ಸಂಕೀರ್ಣ ದಾವೆಗಳಲ್ಲಿನ ಎಲ್ಲಾ ಎದುರು ಅರ್ಜಿದಾರರುಗಳ ವಿರುದ್ಧ ತಂದ ವ್ಯಾಜ್ಯದಲ್ಲಿ 1ನೇ ಎದುರು ಅರ್ಜಿದಾರರು ಬ್ಯಾಂಕಿನ ವ್ಯವಸ್ಥಾಪಕರಾಗಿ ಕಾರ್ಯ

ನಿರ್ವಹಿಸಿದ ಅವಧಿಯಲ್ಲಿ ಅವರ ಕುಟುಂಬದ ಸದಸ್ಯರುಗಳಿಗೆ ನಿಯಮ ಮೀರಿ ನೀಡಿದ್ದ ಸಾಲ ವಸೂಲಾತಿ ಬಗ್ಗೆ ದಾವಾ ದಾಖಲು ಮಾಡಿರುವುದನ್ನು ಅಂಗೀಕರಿಸಿ ಈ ಸಂಬಂಧವಾಗಿ ಮೇಲ್ಕಂಡ ಎಲ್ಲಾ ಸಂಕೀರ್ಣ ದಾವೆಗಳಲ್ಲಿನ ಎದುರುದಾರರುಗಳು, ಸಂಕೀರ್ಣ ದಾವೆ ನಂ.220:04-05 ರಲ್ಲಿನ ಎದುರುದಾರರು ಹಾಗೂ ಅರ್ಜಿದಾರರ ಬ್ಯಾಂಕಿನ ಮಾಜಿ ವ್ಯವಸ್ಥಾಪಕರಾದ ಶ್ರೀ ಹೆಚ್. ನಾಗಯ್ಯ ಇವರ ಕುಟುಂಬದ ಸದಸ್ಯರುಗಳಾಗಿದ್ದು, ಇವರುಗಳಿಗೆ ಮಾಜಿ ವ್ಯವಸ್ಥಾಪಕರಾದ ಶ್ರೀ ಹೆಚ್. ನಾಗಯ್ಯ ಇವರು ಬ್ಯಾಂಕಿನ ಬೈಲಾ ವ್ಯಾವಹಾರಿಕ ನಿಯಮಗಳನ್ನು ಉಲ್ಲಂಘನೆ ಮಾಡಿ, ಸ್ವಜನ ಪಕ್ಷಪಾತಿಯಾಗಿ ನೀಡಿದ ಸಾಲಗಳ ಸುಸ್ತಿದಾರರುಗಳಾಗಿದ್ದು, ಈ ಎಲ್ಲಾ ಒಟ್ಟು ಸಾಲಗಳ ಮೊತ್ತವು ದೊಡ್ಡ ಪ್ರಮಾಣದಲ್ಲಿದ್ದು, ಸದರೀ ಸಾಲಗಳು ವಸೂಲಾತಿ ಆಗದಿರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಮೇಲ್ಕಂಡ ದಾವೆಗಳಲ್ಲಿನ ಎದುರುದಾರರುಗಳ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸುವ ಸಲುವಾಗಿ ಅರ್ಜಿದಾರರು ಎದುರು ಅರ್ಜಿದಾರರುಗಳ ಹೆಸರಿನಲ್ಲಿರುವ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರಡಿಯಲ್ಲಿ ಈ ನ್ಯಾಯಾಲಯದಿಂದ ನೀಡಿದ ದಿನಾಂಕ: 15.2.2005ರ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಇದೇ ನ್ಯಾಯಾಲಯದ ಆದೇಶ ಸಂಖ್ಯೆ: ಸನಿಶಿ 24:ಎಬಿಎನ್:ಎಬಿಜೆ:03-04, ದಿನಾಂಕ: 26.3.2005 ರನ್ವಯ ಸದರೀ ಸ್ಥಿರಾಸ್ತಿಗಳನ್ನು ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಆದೇಶಿಸಲಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ : ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಹೆಚ್. ನಾಗಯ್ಯ ಬಿನ್ ಚನ್ನಬಸಯ್ಯ | ಬೆಳಗಲು ಗ್ರಾಮ, ಹೊಳಲೂರು, ಹೋಬಳಿ, ಶಿವಮೊಗ್ಗ ತಾಲ್ಲೂಕು. | 1) ಸರ್ವೆ ನಂ.56:ಪಿ2<br>2) ಸರ್ವೆ ನಂ.58:ಪಿ5 | 7.20 ಎ.ಗುಂ.<br>1.20 ಎ.ಗುಂ. | ಖುಷ್ಕಿ<br>ತರಿ |
| 2) | ಹೆಚ್.ಎನ್. ಚಿದಾನಂದ ಮೂರ್ತಿ ಬಿನ್ ಹೆಚ್. ನಾಗಯ್ಯ. | ಬೆಳಗಲು ಗ್ರಾಮ, ಹೊಳಲೂರು, ಹೋಬಳಿ, ಶಿವಮೊಗ್ಗ ತಾಲ್ಲೂಕು. | 1) ಸರ್ವೆ ನಂ.65:ಪಿ3<br>2) ಸರ್ವೆ ನಂ.64:ಪಿ5 | 1.22 ಎ.ಗುಂ.<br>0.33 ಎ.ಗುಂ. | ತರಿ<br>ತರಿ |
| 3) | ಹೆಚ್.ಎನ್. ಸುರೇಶ್ ಬಿನ್ ಹೆಚ್. ನಾಗಯ್ಯ | ಬೆಳಗಲು ಗ್ರಾಮ, ಹೊಳಲೂರು, ಹೋಬಳಿ, ಶಿವಮೊಗ್ಗ ತಾಲ್ಲೂಕು. | 1) ಸರ್ವೆ ನಂ.58:ಪಿ2<br>2) ಸರ್ವೆ ನಂ.64:ಪಿ4 | 1.15 ಎ.ಗುಂ.<br>0.34 ಎ.ಗುಂ. | ಖುಷ್ಕಿ<br>ತರಿ |
| 4) | ನಾಗರತ್ನಮ್ಮ ಕೋಂ ಹೆಚ್. ನಾಗಯ್ಯ | ಬೆಳಗಲು ಗ್ರಾಮ, ಹೊಳಲೂರು, ಹೋಬಳಿ, ಶಿವಮೊಗ್ಗ ತಾಲ್ಲೂಕು. | 1) ಸರ್ವೆ ನಂ.58:ಪಿ6<br>2) ಸರ್ವೆ ನಂ.65:ಪಿ2 | 2.10 ಎ.ಗುಂ.<br>1.00 ಎ.ಗುಂ. | ಖುಷ್ಕಿ<br>ತರಿ |
| 5) | ಹೆಚ್. ವೀರಭದ್ರಯ್ಯ ಬಿನ್ ಚನ್ನಬಸಯ್ಯ | ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಕೊಟ್ಟೂರು ಹೋಬಳಿ, ಉಜ್ಜನಿ. | 1) ಸರ್ವೆ ನಂ.1323 | 3.00 ಎ.ಗುಂ. | ಖುಷ್ಕಿ |
| 6) | ಹೆಚ್. ಭದ್ರಯ್ಯ ಬಿನ್ ಚನ್ನಬಸಯ್ಯ | ಭದ್ರಾವತಿ ತಾ: ಮತ್ತು ಕಸಬಾ ಹೋಬಳಿ, ಸಿಂಗನಮನೆ ಗ್ರಾಮ | 1) ಸರ್ವೆ ನಂ.58:ಪಿ1 | 2.15 ಎ.ಗುಂ. | ತರಿ |
| 7) | ಹೆಚ್. ಚಂದ್ರಯ್ಯ ಬಿನ್ ಚನ್ನಬಸಯ್ಯ | ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಕೊಟ್ಟೂರು ಹೋಬಳಿ, ಉಜ್ಜನಿ. | 1) ಸರ್ವೆ ನಂ.1323 | 3.76 ಎ.ಗುಂ. | ಖುಷ್ಕಿ |
| 8) | ಚನ್ನಬಸಯ್ಯ ಬಿನ್ ಭದ್ರಯ್ಯ | ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾಲ್ಲೂಕು, ಕೊಟ್ಟೂರು ಹೋಬಳಿ, ಉಜ್ಜನಿ. | 1) ಸರ್ವೆ ನಂ.1318:ಡಿ<br>2) ಸರ್ವೆ ನಂ.1319:ಬಿ<br>3) ಸರ್ವೆ ನಂ.1320:ಇ | 2.38 ಎ.ಗುಂ.<br>0.77 ಎ.ಗುಂ.<br>2.26 ಎ.ಗುಂ. | ಖುಷ್ಕಿ<br>ಖುಷ್ಕಿ<br>ಖುಷ್ಕಿ |
| 9) | ದ್ರಾಕ್ಷಾಯಣಮ್ಮ ಕೋಂ ಚಂದ್ರಯ್ಯ | ಶಿವಮೊಗ್ಗ ತಾಲ್ಲೂಕು, ಬಿ.ಬೀರನಹಳ್ಳಿ ಗ್ರಾಮ | 1) ಸರ್ವೆ ನಂ.56:ಪಿ<br>2) ಸರ್ವೆ ನಂ.56:ಪಿ | 1.00 ಎ.ಗುಂ.<br>1.36 ಎ.ಗುಂ. | ತರಿ<br>ತರಿ |

ಮೇಲ್ಕಂಡ ಸಂಕೀರ್ಣ ದಾವಾಗಳಲ್ಲಿನ ಅರ್ಜಿದಾರರು ದಿನಾಂಕ: 26.9.2005 ರಂದು ಸಲ್ಲಿಸಿದ ಅರ್ಜಿಯಲ್ಲಿ ಬ್ಯಾಂಕಿನ ದಿನಾಂಕ: 25.9.2005 ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಈ ಪ್ರಕರಣದ ಎಲ್ಲಾ ಎದುರುದಾರರುಗಳು ಪ್ರತಿ ಪ್ರಕರಣಗಳಲ್ಲಿ ಪಡೆದ ಪೂರ್ಣ ಸಾಲವನ್ನು ಮರುಪಾವತಿಸಿದ್ದು ಸಾಲ ಬಾಕಿ ಏನೂ ಇರುವುದಿಲ್ಲ. ಮೇಲ್ಕಂಡ ಎಲ್ಲಾ ಎದುರುದಾರರುಗಳು ಬರಬೇಕಾದ ಸಾಲ ಪೂರ್ಣ ತೀರುವಳಿ ಮಾಡಿರುವುದರಿಂದ ಅವರುಗಳ ಜಪ್ತಿ ಮಾಡಿದ ಸ್ಥಿರಾಸ್ತಿಯನ್ನು ರಿಲೀಜ್ ಮಾಡಲು ಸರ್ವಾನುಮತದಿಂದ ತೀರ್ಮಾನಿಸಿರುವುದಾಗಿ ವರದಿ ಮಾಡಿ, ಸದರೀ ನಿರ್ಣಯದ ಪ್ರತಿ ಸಲ್ಲಿಸಿರುತ್ತಾರೆ. ಹಾಗೂ ಈ ಸಂಬಂಧ ಸರ್ಕಾರದ ಬಡ್ಡಿ ಮನ್ನಾ ಯೋಜನೆಯಡಿಯಲ್ಲಿ ಬಡ್ಡಿ ಬಿಲ್ಲುಗಳನ್ನು ತಯಾರಿಸಿ, ಬಡ್ಡಿ ಬಿಲ್ಲುಗಳ ಕ್ಲೈ ಮಾಡಿರುವುದಾಗಿ ದೃಢೀಕರಣ ನೀಡಿದ್ದಾರೆ. ಈ ನ್ಯಾಯಾಲಯದಿಂದ ನೀಡಿದ್ದ ಕಾಯ್ದೆ ಕಲಂ 103ರ ಜಪ್ತಿಗೊಳಿಸಿದ ಮೇಲ್ಕಂಡ ಪ್ರಕರಣಗಳ ಎಲ್ಲಾ ಎದುರುದಾರರ ಸ್ಥಿರಾಸ್ತಿಯನ್ನು ರಿಲೀಜ್ ಮಾಡಿ ಸೂಕ್ತ ಆದೇಶವನ್ನು ನೀಡಿ, ಸಬ್ ರಿಜಿಸ್ಟರ್ ಹಾಗೂ ತಹಶೀಲ್ದಾರ್ ರವರಿಗೆ ಕಳುಹಿಸುವಂತೆ ಕೋರಿರುತ್ತಾರೆ. ಸಂಕೀರ್ಣ ದಾವಾ ನಂ.220:04-05 ರಲ್ಲಿನ ಎದುರು ಅರ್ಜಿದಾರರಾದ ಮಾಜಿ ವ್ಯವಸ್ಥಾಪಕ ಶ್ರೀ ಹೆಚ್. ನಾಗಯ್ಯ ಇವರ ಪತ್ನಿ ಶ್ರೀಮತಿ ನಾಗರತ್ನಮ್ಮ ನವರು ಸಲ್ಲಿಸಿರುವ ದಿನಾಂಕ: 27.9.2005ರ ಪ್ರಮಾಣಪತ್ರದಲ್ಲಿ ಅರ್ಜಿದಾರರ ಬ್ಯಾಂಕಿನ ಕಾಯಿದೆ ಕಲಂ 64ರ ವಿಚಾರಣಾ ವರದಿಗೆ ನೀಡಿದ ಕಾಯಿದೆ ಕಲಂ 68ರ ಆದೇಶದನುಸಾರ ಅರ್ಜಿದಾರರ ಬ್ಯಾಂಕ್ ಕ್ರಮ ಕೈಗೊಂಡಲ್ಲಿ ಸಂಬಂಧಪಟ್ಟ ಯಾವುದೇ ನ್ಯಾಯಾಲಯ ತನ್ನ ಪತಿ ಶ್ರೀ ಹೆಚ್. ನಾಗಯ್ಯ ಇವರಿಂದ ಯಾವುದೇ ಮೊಬಲಗಿನ ವಸೂಲಾತಿಗಾಗಿ ಆದೇಶ ನೀಡಿದಲ್ಲಿ ಸದರೀ ಮೊಬಲಗಿನ ವಸೂಲಾತಿಗೆ ಯಾವುದೇ ತೊಂದರೆ ಇಲ್ಲದಂತೆ ಸೂಕ್ತ ಆಧಾರವನ್ನು ನನ್ನ ಪತಿಯ ಪರವಾಗಿ ಅರ್ಜಿದಾರರ ಬ್ಯಾಂಕಿಗೆ ನೀಡುವುದು ಅವಶ್ಯಕವೆಂದು ಮನಗಂಡಿರುತ್ತೇನೆ ಮತ್ತು ನನ್ನ ಪತಿ ಶ್ರೀ ಹೆಚ್. ನಾಗಯ್ಯ ಅವರ ವಿರುದ್ಧದ ನ್ಯಾಯಾಲಯದ ಡಿಕ್ರಿ ಮೊಬಲಗನ್ನು ನಾನು ಪಾವತಿಸಲು ಜವಾಬ್ದಾರಳಾಗಿರುವುದಿಲ್ಲ ಈ ಬಗ್ಗೆ ಶಿವಮೊಗ್ಗ ತಾಲ್ಲೂಕು ಹೊಳಲೂರು ಹೋಬಳಿ ಬೆಳಗಲು ಗ್ರಾಮದ ಸರ್ವೆ ನಂ.65:ಪಿ2 ರಲ್ಲಿನ ಒಂದು ಎಕರೆ ಭಾಗಾಯ್ತು (ಅಡಿಕೆ ಬಾಳೆ ಬೆಳೆಯುವ ಸ್ಥಳ) ಅಂದಾಜು ಮೌಲ್ಯ ಆರು ಲಕ್ಷ ರೂಪಾಯಿ ಸ್ಥಿರಾಸ್ತಿಯನ್ನು ಆಧಾರವಾಗಿ ನೀಡುತ್ತೇನೆ. ಆದಕಾರಣ, ಈ ನ್ಯಾಯಾಲಯದಿಂದ ಜಪ್ತು ಕ್ರಮಕ್ಕೆ ಒಳಗಾದ ಸ್ಥಿರಾಸ್ತಿಗಳ ಮೇಲಿನ ಜಪ್ತಿ ಆದೇಶವನ್ನು ತೆರವುಗೊಳಿಸಲು ಪ್ರಾರ್ಥಿಸಿದ್ದಾರೆ.

ಆದ್ದರಿಂದ ಮೇಲ್ಕಂಡ ಸಂಕೀರ್ಣ ದಾವಾ ಸಂಖ್ಯೆ: 220:04-05 ರಿಂದ 229:04-05 ರವರೆಗಿನ ಅರ್ಜಿದಾರರ ಬ್ಯಾಂಕಿನ ದಿನಾಂಕ: 25.9.2005ರ ಆಡಳಿತ ಮಂಡಳಿ ನಿರ್ಣಯ, ಸದರೀ ಬ್ಯಾಂಕಿನ ವ್ಯವಸ್ಥಾಪಕರ ದಿನಾಂಕ: 26.9.2005ರ ಪತ್ರ ಮತ್ತು ದೃಢೀಕರಣ ಹಾಗೂ

ಅರ್ಜಿದಾರರ ಬ್ಯಾಂಕ್ ಒದಗಿಸಿದ ದಾಖಲೆಗಳ ಪರಿಶೀಲನೆ ಮತ್ತು ಸಂಕೀರ್ಣ ದಾವಾ ಸಂಖ್ಯೆ: 223:04-05ರ ಎದುರು ಅರ್ಜಿದಾರರಾದ ಶ್ರೀಮತಿ ನಾಗರತ್ನಮ್ಮ, ಕೋಂ ಹೆಚ್. ನಾಗಯ್ಯ, ಬೆಳಗಲು ಗ್ರಾಮ, ಬಿ.ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು ಇವರ ದಿನಾಂಕ: 27.9.2005ರ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸನಿಶಿ 24:ಎಬಿಎನ್:ಎಬಿಜೆ:05-06, ದಿನಾಂಕ: 4ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಈ ನ್ಯಾಯಾಲಯದ ಆದೇಶ ಸಂಖ್ಯೆ: ಸನಿಶಿ24:ಎಬಿಎನ್:ಎಬಿಜೆ:03-04, ದಿನಾಂಕ: 26.3.2005 ರಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ಹೊರಡಿಸಿದ ಷರತ್ತು ಪೂರ್ವಕ ಜಪ್ತು ಆಜ್ಞೆಯ ಸ್ಥಿರೀಕರಣ ಆದೇಶದಲ್ಲಿನ ಸಂಕೀರ್ಣ ದಾವಾ ನಂ.223:04-05 ರಲ್ಲಿನ ಸರ್ವೆ ನಂ.65:ಪಿ2 ರಲ್ಲಿನ ಸ್ಥಿರಾಸ್ತಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಸ್ಥಿರಾಸ್ತಿಗಳನ್ನು ಸದರೀ ಆದೇಶದ ಪ್ರತಿಬಂಧಕಾಜ್ಞೆಯಿಂದ ತೆರವುಗೊಳಿಸಿ, ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 4.10.2005 ರಂದು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಆದೇಶಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್. 1642

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್

**ವಿಷಯ :** ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಸಾದಲಾಪೂರ ತಾ: ಬಸವಕಲ್ಯಾಣ ಇದರ ನೋಂದಣಿ ಸಂಖ್ಯೆ ರದ್ದು ಪಡಿಸುವ ಕುರಿತು.

**ಉಲ್ಲೇಖ :** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/2005-2006/2461/ದಿನಾಂಕ: 15.09.2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/2005-06/ದಿನಾಂಕ: 30.9.2005.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಸಾದಲಾಪೂರ ತಾ: ಬಸವಕಲ್ಯಾಣ ಈ ಸಂಘವು **ಸಂಖ್ಯೆ: ಸನಿಬಿ1/ವಿ4/ಜೆಓಸಿ/232557/ ದಿನಾಂಕ: 12.3.1997** ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಮೂಲಕ ಉಲ್ಲೇಖ (2)ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರು ಸಂಘದಲ್ಲಿ ಯಾವುದೇ ಆಸ್ತಿ-ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005-06/2754, ದಿನಾಂಕ: 30ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200/ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ ಸಹಕಾರ ಸಂಘಗಳ ಉಪನಿಬಂಧಕರು, ಬೀದರ್ ಜಿಲ್ಲೆ, ಬೀದರ್** ಆದ ನಾನು ಸಮಾಪನೆಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾದಲಾಪೂರ ತಾ: ಬಸವಕಲ್ಯಾಣ** ಇದರ ನೋಂದಣಿ **ಸಂಖ್ಯೆ: ಸನಿಬಿ1/ವಿ4/ಜೆಓಸಿ/232557, ದಿನಾಂಕ: 12.3.1997**ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 30.9.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1643 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

## ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕಾ ಸಹಕಾರ ಸಂಘಗಳು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು-52 ಇವರ ನಡವಳಿಗಳು

**ವಿಷಯ :** ನಿಷ್ಕ್ರಿಯಗೊಂಡಿರುವ ದಕ್ಷಿಣ ಕನ್ನಡ ಜಿಲ್ಲಾ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಕುಶಲ ಕೈಗಾರಿಕಾ ಕೆಲಸಗಾರರ ಸಹಕಾರ ಸಂಘ ನಿಯಮಿತ, ಕದ್ರಿ, ಮಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಇವರ ಪತ್ರ ಸಂಖ್ಯೆ: ಜೆಆರ್ಎಂ/ಬಿ-2/ಡಿಎಲ್ಎಸ್/36/2005-06, ದಿನಾಂಕ: 25.6.2005.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲಾ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಕುಶಲ ಕೈಗಾರಿಕಾ ಕೆಲಸಗಾರರ ಸಹಕಾರ ಸಂಘ ನಿಯಮಿತ, ಕದ್ರಿ, ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಉಲ್ಲೇಖಿತ ಪತ್ರದಲ್ಲಿ ಈ ಕೆಳಕಂಡ ಕಾರಣಗಳಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

1. ಸಂಘವು 1968 ರಲ್ಲಿ ನೋಂದಣಿಯಾಗಿದ್ದು, 1998-99 ರಿಂದ ಯಾವುದೇ ಕೆಲಸವನ್ನು ನಿರ್ವಹಿಸದೆ ನಿಷ್ಕ್ರಿಯಗೊಂಡಿರುತ್ತದೆ.
2. 1988-89ನೇ ಸಾಲಿನ ನಂತರ ಆಡಿಟ್ ಆಗಿರುವುದಿಲ್ಲವೆಂದೂ, ಉಪ ನಿಬಂಧಕರವರು ವರದಿಸಿರುವುದಲ್ಲದೆ ದಿನಾಂಕ: 23.4.2001 ರಂದು ಸಂಘಕ್ಕೆ ನೋಟೀಸು ನೀಡಿ ಸಂಘವನ್ನು ಏಕೆ ಸಮಾಪನೆಗೊಳಿಸಬಾರದೆಂಬುದಕ್ಕೆ ವಿವರಣೆ ಕೇಳಿದ್ದು, ಈ ಬಗ್ಗೆ ಯಾವುದೇ ಪ್ರತ್ಯುತ್ತರ ವಿರುವುದಿಲ್ಲವೆಂದು ತಿಳಿಸಿರುತ್ತಾರೆ.

3. ಸದರಿ ಸಂಘವನ್ನು ಮುನ್ನೆಡೆಸಿಕೊಂಡು ಹೋಗಲು ಸಂಘದ ಸದಸ್ಯರಿಗೇ ಆಗಲಿ ಅಥವಾ ಆಡಳಿತ ಮಂಡಳಿಯ ಸದಸ್ಯರಿಗೇ ಆಗಲಿ ಆಸಕ್ತಿ ಇರುವುದಿಲ್ಲವಾದ್ದರಿಂದ ಸಂಘವನ್ನು ಸಮಾಪನೆಗೊಳಿಸಬೇಕೆಂದು ಉಪನಿಬಂಧಕರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

ಹೀಗೆ ಹಲವಾರು ವರ್ಷಗಳಿಂದ ಯಾವುದೇ ಕಾರ್ಯನಿರ್ವಹಿಸದೇ ಸಂಘವು ನಿಷ್ಕ್ರಿಯಗೊಂಡಿರುವುದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸಮರ್ಪಕವೆಂದು ಪರಿಗಣಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಅನಿ/ಕೈಸಸಂ/98/ಸಮಾ/2005-06, ದಿನಾಂಕ: 19ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ.ಕೆ. ಸುಭಾಷ್‌ಚಂದ್ರ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕಾ ಸಹಕಾರ ಸಂಘಗಳು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಅಸ್ಕರ್ ರಸ್ತೆ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)(ಬಿ) ಅನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರಲ್ಲಿ ಮತ್ತು ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2004, ದಿನಾಂಕ: 6.10.2004 ರಲ್ಲಿ ನನಗೆ ದತ್ತವಾದ ಅಧಿಕಾರದನ್ವಯ ದಕ್ಷಿಣ ಕನ್ನಡ ಜಿಲ್ಲಾ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಕುಶಲ ಕೈಗಾರಿಕಾ ಕೆಲಸಗಾರರ ಸಹಕಾರ ಸಂಘ ನಿಯಮಿತ, ಕದ್ರಿ, ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಶ್ರೀ ಹೆಚ್. ದೇವಾಡಿಗ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಉಪ ವಿಭಾಗ, ಮಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿವಸಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತೆ ಪಟ್ಟಿ ತಯಾರಿಸಿ ಕೆಳಗೆ ಸಹಿ ಮಾಡಿರುವವರ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಕಛೇರಿಯ ಮೊಹರು ಹಾಗೂ ನನ್ನ ಸಹಿಯೊಂದಿಗೆ ದಿನಾಂಕ: 19.10.2005 ರಂದು ನೀಡಲಾಗಿದೆ.

**ಬಿ.ಕೆ. ಸುಭಾಷ್‌ಚಂದ್ರ**

ಪಿ.ಆರ್. 1644 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕಾ ಸಹಕಾರ ಸಂಘಗಳು).

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ರವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಜೆಆರ್‌ಬಿ 2014:2005-06**

| **ಅರ್ಜಿದಾರರು :** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಶ್ರೀ ಕೆ. ಸದಾನಂದ ಶಾಸ್ತ್ರಿ ಬಿನ್ ಲೇಟ್ ಶ್ರೀನಿವಾಸ ಶಾಸ್ತ್ರಿ ಎಸ್.ಕೆ.,<br>ವಯಸ್ಸು 56 ವರ್ಷ<br>ವಾಸ ನಂ: 44:1, ಪಶ್ಚಿಮ ಆಂಜನೇಯ ದೇವಸ್ಥಾನ ರಸ್ತೆ,<br>ಬಸವನಗುಡಿ,<br>ಬೆಂಗಳೂರು-560 004. | | 1) ಕೆ. ಗುರುರಾಜ್ ಬಿನ್ ಲೇಟ್ ಕೃಷ್ಣಮೂರ್ತಿ ಸಿ., ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷ.<br>2) ನರಸಿಂಹಮೂರ್ತಿ ಬಿನ್ ರಾಮಾಚಾರ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>3) ಶ್ರೀಮತಿ ಪದ್ಮಾವತಿ ಬಿನ್ ಶ್ರೀನಿವಾಸ ಮೂರ್ತಿ, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>4) ಶ್ರೀಮತಿ ಮಾಲತಿಬಾಯಿ ಕೋಂ ಲೇಟ್ ಕೃಷ್ಣೋಜಿ ರಾವ್ ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>**ಪ್ರತಿವಾದಿ 1 ರಿಂದ 4 ರವರ ವಾಸ:**<br>ನಂ.40, 12ನೇ ಮೈನ್, 12ನೇ ಕ್ರಾಸ್, ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-50. |
| | | 5) ವಾಸುದೇವ ಭಟ್ ಬಿನ್ ಶ್ರೀನಿವಾಸ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>6) ವಿಷ್ಣುಮೂರ್ತಿ ಬಿನ್ ಶ್ರೀನಿವಾಸ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು.<br>7) ಶ್ರೀಮತಿ ಅನುಪಮ ಕೋಂ ವಿಷ್ಣುಮೂರ್ತಿ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು.<br>**ಪ್ರತಿವಾದಿ 5 ರಿಂದ 7 ರವರ ವಾಸ:**<br>ನಂ.44, ಎಲ್.ಐ.ಜಿ. 8ನೇ ಕ್ರಾಸ್, ಕೆಂಗೇರಿ ಉಪನಗರ, ಬೆಂಗಳೂರು-60. |
| | | 8) ಶ್ರೀಮತಿ ಸಂಧ್ಯಾ ಕೆ. ರಾವ್ ಕೋಂ ಕೆ. ಗುರುರಾಜ್ ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>9) ಕೆ. ತಿರುಮಲೇಶ್ ಬಿನ್ ಕೃಷ್ಣೋಜಿ ರಾವ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.<br>**ಪ್ರತಿವಾದಿ 8 ರಿಂದ 9 ರವರ ವಾಸ:**<br>ನಂ.40, 12ನೇ ಮೈನ್, 12ನೇ ಕ್ರಾಸ್, ರಾಘವೇಂದ್ರ ದೇವಸ್ಥಾನದ ಹಿಂದೆ, ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-50. |
| | | 10) ಕೆ.ಎಸ್. ಸುಬ್ರಮಣ್ಯ ಬಿನ್ ಸತ್ಯನಾರಾಯಣ ಮಾಜಿ ಕಾರ್ಯದರ್ಶಿ, ಮನೋನ್ಮಯಿ ಸೊಸೈಟಿ.<br>**ವಾಸ ನಂ:** 1048, 19ನೇ 'ಎ' ರಸ್ತೆ ಹೆಚ್.ಬಿ.ಆರ್. ಲೇಔಟ್, ನಾಗವಾರ, ಬೆಂಗಳೂರು-45. |

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಪ್ರಕಾರ ಸ್ಥಿರ ಆಸ್ತಿಯನ್ನು ಅಟ್ಯಾಚ್ ಬಗ್ಗೆ ನೋಟೀಸ್:

ವಾದಿಯು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರ ಅನ್ವಯ ಈ ನ್ಯಾಯಾಲಯದಲ್ಲಿ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.1,57,054-00 ಗಳನ್ನು ದಿನಾಂಕ: 30.9.2005 ರಿಂದ ಸಾಲಿಯಾನ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 103 ಅನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳು 1, 8 ಮತ್ತು 9 ಇವರುಗಳ ಹೆಸರಿನಲ್ಲಿರುವ ಈ ಕೆಳಗಿನ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ 8 ಮತ್ತು 9 ಅವರ ಹೆಸರಿನಲ್ಲಿ ಈಗಾಗಲೇ ಅರ್ಜಿಯಲ್ಲಿ ತೋರಿಸಿರುವಂತೆ ಆಸ್ತಿಗಳು ಇರುವುದು ಕಂಡು ಬಂದಿರುತ್ತದೆ. ಸದರಿ 'ಎ' ಮತ್ತು 'ಬಿ' ಷೆಡ್ಯೂಲ್ ಆಸ್ತಿಗಳನ್ನು ಸಂಘದ ಹಣದಿಂದ ಹೊಂದಿರುವುದಾಗಿ ತಿಳಿದು ಬಂದಿರುತ್ತದೆ. 'ಸಿ' ಷೆಡ್ಯೂಲಿನಲ್ಲಿ ತೋರಿಸಿರುವ ಸ್ಥಿರಾಸ್ತಿಯಾದ ಕಟ್ಟಡವು ಕಾಳಿದಾಸ ಲೇಔಟ್‌ನಲ್ಲಿದ್ದು, ಈ ಸ್ಥಿರಾಸ್ತಿಯನ್ನು ಕೊಳ್ಳಲು ಮನೋನ್ಮಯಿ ಸೊಸೈಟಿಯ ಹಣವನ್ನು ಉಪಯೋಗಿಸಿರುವುದು ಅರ್ಜಿದಾರರ ಪ್ರಮಾಣಪತ್ರದಿಂದ ಕಂಡು ಬಂದಿರುತ್ತದೆ. ಇದಲ್ಲದೆ, ಈ ಸದರಿ ಆಸ್ತಿಯ ಮಾಲೀಕರಾದ ರಾಘವೇಂದ್ರ ರಾವ್, ಇದೇ ಆಸ್ತಿಯ ಮೇಲೆ ಆಧಾರವಾಗಿಟ್ಟು ಸೊಸೈಟಿಯಿಂದ ಸಾಲ ಪಡೆದುಕೊಂಡಿರುವುದು ಈ ಪ್ರಮಾಣಪತ್ರದಿಂದ ತಿಳಿದು ಬಂದಿರುತ್ತದೆ. ಆದ್ದರಿಂದ ಈ 'ಸಿ' ಷೆಡ್ಯೂಲು ಆಸ್ತಿ ಕೂಡಾ ಮೊದಲನೇ ಪ್ರತಿವಾದಿ ಹೆಸರಿನಲ್ಲಿ ಮಾರಾಟದ ಒಪ್ಪಂದದ ಕರಾರು ಆಗಿರುವುದಾಗಿ ತಿಳಿದು ಬಂದಿರುತ್ತದೆ. ಪ್ರತಿವಾದಿಗಳಾದ 1, 8 ಮತ್ತು 9 ರವರುಗಳ ಹೆಸರಿನಲ್ಲಿರುವ ಕೆಳಕಂಡ 'ಎ', 'ಬಿ' ಮತ್ತು 'ಸಿ' ಸೊತ್ತುಗಳನ್ನು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಡಿಕ್ರಿ ನೀಡಿದ್ದರೂ, ಸದರಿ ಅವಾರ್ಡ್ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ಕಲಂ 103ರ ರೀತ್ಯ ಸಲ್ಲಿಸಿರುವ ಅರ್ಜಿಗಳನ್ನು ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಗಳ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ 'ಎ' 'ಬಿ' 'ಸಿ' ಸ್ವತ್ತುಗಳನ್ನು ಮಾರಾಟ ಮಾಡದಂತೆ ತಡೆಯದಿದ್ದಲ್ಲಿ ವಾದಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ : ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ - ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಆದ ನಾನು ಪ್ರತಿವಾದಿಗಳಾದ 1, 8 ಮತ್ತು 9 ರವರುಗಳ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,57,054-00 ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯದಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 25.11.2005 ರಂದು ಮ: 3 ಗಂಟೆಯೊಳಗಾಗಿ ಅಧಿಕೃತ ಚಲನ್ : ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದ ನಿಗದಿತ ದಿನಾಂಕದೊಳಗೆ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವೂ ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**8ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ:- "ಎ" ಷೆಡ್ಯೂಲು**

1) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಎಫ್ ಕೋಡು (ಪಿ.ಪಿ.12) ಖುಷ್ಕಿ ಒಂದು ಎಕರೆ ಮತ್ತು ಇದೇ ಸರ್ವೆ ನಂ.52ನೇ ಹೆಚ್ ಕೋಡು (ಪಿ.ಪಿ. 14) ಖುಷ್ಕಿ 4 ಎಕರೆ ಎರಡು ತಾಕು ಜಮೀನು ಒಟ್ಟು 5 ಎಕರೆ ಖುಷ್ಕಿ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಶ್ರೀಮತಿ ಸಂಧ್ಯಾರವರ ಸದರಿ ಸರ್ವೆ ನಂಬರಿನ ಜಮೀನು
ಪಶ್ಚಿಮಕ್ಕೆ : ಸದರಿ ಸರ್ವೆ ನಂಬರಿನಲ್ಲಿರುವ ಖರೀದಿದಾರರಾದ ತಿರುಮಲ್ಲೇಶರವರ ಜಮೀನು
ಉತ್ತರಕ್ಕೆ : ಸರ್ಕಾರಿ ತೊರೆ ಹಳ್ಳ ಮತ್ತು
ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ

2) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಕೋಡು (ಪಿ.ಪಿ.8) ಖುಷ್ಕಿ ಒಂದು ಎಕರೆ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಶ್ರೀ ವೆಂಕಟಪ್ಪನವರ ಜಮೀನು
ಪಶ್ಚಿಮಕ್ಕೆ : ಶ್ರೀ ಮುನಿಸ್ವಾಮಯ್ಯನವರ ಜಮೀನು
ಉತ್ತರಕ್ಕೆ : ರಸ್ತೆ, ಮತ್ತು
ದಕ್ಷಿಣಕ್ಕೆ : ಖರೀದಿದಾರರಾದ ಶ್ರೀ ತಿರುಮಲ್ಲೇಶ್ ರವರ ಜಮೀನು.

3) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ.11) ಎಂ.ಆರ್. 38:2003-04 ರಲ್ಲಿ ಮಾರಾಟಗಾರರ ಹೆಸರಿಗೆ ಖಾತೆಯಾಗಿರತಕ್ಕ ಖಾತೆ ನಂ.2 ಎಂದು ನಂಬರಾಗಿರತಕ್ಕ ಖುಷ್ಕಿ 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚೆಕ್ಕುಬಂದಿ:

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು
ಪಶ್ಚಿಮಕ್ಕೆ : ನಿಮ್ಮ ಸ್ವಂತ ಜಮೀನು
ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು
ದಕ್ಷಿಣಕ್ಕೆ : ಸ್ವಂತ ಜಮೀನು

4) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ 7ನೇ ಕೋಡು (ಪಿ.ಪಿ.11) ಖುಷ್ಕಿ ಸುಮಾರು 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚೆಕ್ಕುಬಂದಿ:

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು
ಪಶ್ಚಿಮಕ್ಕೆ : ನಂಜಯ್ಯನ ಜಮೀನು
ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು
ದಕ್ಷಿಣಕ್ಕೆ : ನಿಮ್ಮ ಸ್ವಂತ ಜಮೀನು.

5) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಜೆ (ಪಿ.ಪಿ.13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗಕ್ಕೆ 2-00 (ಎರಡು ಎಕರೆ) ಖುಷ್ಕಿ ಜಮೀನಿಗೆ ಚೆಕ್ಕುಬಂದಿ:

ಪೂರ್ವಕ್ಕೆ : ಇದೇ ಸರ್ವೆನಂಬರಿನಲ್ಲಿ ಶ್ರೀಮತಿ ಸಂಧ್ಯಾರವರಿಗೆ ಕ್ರಯ ಮಾಡಿರುವ ಆಸ್ತಿ
ಪಶ್ಚಿಮಕ್ಕೆ : ಮುನಿಸ್ವಾಮಯ್ಯನವರ ಜಮೀನು
ಉತ್ತರಕ್ಕೆ : ಇದೇ ಸರ್ವೆ ನಂಬರಿನಲ್ಲಿ ಕೆ.ಎಸ್. ಮಂಜುನಾಥ ಉಳಿಸಿಕೊಂಡಿರುವ ಜಮೀನು
ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡಕಾವಲ್

**9ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ:- "ಬಿ" ಷೆಡ್ಯೂಲು**

1) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ. 13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗ 2-00 (ಎರಡು ಎಕರೆ) ಖುಷ್ಕಿ ಜಮೀನಿಗೆ ಚೆಕ್ಕುಬಂದಿ:

ಪೂರ್ವಕ್ಕೆ : ಕೆ.ಎಸ್. ಪ್ರಭಾಕರ್ ರವರ ಜಮೀನು
ಪಶ್ಚಿಮಕ್ಕೆ : ಇದೇ ಸರ್ವೆ ನಂಬರಿನಲ್ಲಿ ಶ್ರೀ ತಿರುಮಲ್ಲೇಶ್‌ರವರಿಗೆ ಕ್ರಯಮಾಡಿರುವ ಆಸ್ತಿ
ಉತ್ತರಕ್ಕೆ : ಇದೇ ಸರ್ವೆ ನಂಬರಿನಲ್ಲಿ ಕೆ.ಎಸ್. ಮಂಜುನಾಥ ಉಳಿಸಿಕೊಂಡಿರುವ ಜಮೀನು
ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡಕಾವಲ್.

2) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಇ ಕೋಡು ಖುಷ್ಕಿ 3-00 ಎಕರೆ ಮತ್ತು ಇದೇ ಸರ್ವೆ ನಂ.52ನೇ ಎಫ್ ಕೋಡು ಖುಷ್ಕಿ 3-00 ಎಕರೆ 2 ತಾಕು ಜಮೀನು ಹಾಲಿ ಪಿ.ಪಿ.11 ಮತ್ತು ಪಿ.ಪಿ.12ನೇ ಕೋಡು ನಂಬರುಗಳಾಗಿರತಕ್ಕ ಒಟ್ಟು 6-00 ಎಕರೆ ಖುಷ್ಕಿ ಜಮೀನಿನಲ್ಲಿ 3-00 ಎಕರೆ ತೆಂಗು ಮತ್ತು ಉಳಿಕೆ 3-00 ಎಕರೆ ಖುಷ್ಕಿ ಜಮೀನಿನಲ್ಲಿ ತೆಂಗು ಇರುವುದಿಲ್ಲ ಸದರಿ ಜಮೀನಿಗೆ ಚೆಕ್ಕುಬಂದಿ:

ಪೂರ್ವಕ್ಕೆ : ವೆಂಕಟಯ್ಯ ಮತ್ತು ಬೋರಯ್ಯನವರ ಜಮೀನು
ಪಶ್ಚಿಮಕ್ಕೆ : ಸದರಿ ಸರ್ವೆನಂಬರಿನ ಮಾಲೀಕರಾದ ವಿಜಯಮ್ಮನವರಿಂದ ಶ್ರೀ ತಿರುಮಲ್ಲೇಶರವರಿಗೆ ಕ್ರಯದ ಕರಾರು ಮಾಡಿಕೊಂಡಿರುವ ಜಮೀನು
ಉತ್ತರಕ್ಕೆ : ಸರ್ಕಾರಿ ತೊರೆಹಳ್ಳ
ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್

**1ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲು ಸ್ವತ್ತಿನ ವಿವರ:- 'ಸಿ' ಷೆಡ್ಯೂಲು**

1) ಮನೋನ್ಮಯಿ ಕ್ರೆಡಿಟ್ ಸೊಸೈಟಿಗೆ ಒಪ್ಪಂದದ ಮೂಲಕ ಮಾರಾಟವಾಗಿ ಮೊದಲನೇ ಪ್ರತಿವಾದಿಯ ಹೆಸರಿನಲ್ಲಿ ಒಪ್ಪಂದದ ಕರಾರು ಆಗಿರುವ ಮನೆ ಸ್ವತ್ತು ಬೆಂಗಳೂರು ನಗರ, ಬೆಂಗಳೂರು-560 050, ಶ್ರೀನಗರ, ಕಾಳಿದಾಸ ಬಡಾವಣೆಯ 3ನೇ ಅಡ್ಡರಸ್ತೆ, 1ನೇ ಮುಖ್ಯರಸ್ತೆ, ನಂ.68 ರಲ್ಲಿರುವ ಕಟ್ಟಿದ ಮನೆ ವಿಸ್ತೀರ್ಣ 37 X 28 ಅಡಿಗಳು ಅಳತೆಯಿರುತ್ತದೆ. ಈ ಸ್ವತ್ತು 'ಸಿ' ಷೆಡ್ಯೂಲ್‌ಗೆ ಸೇರಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ........... ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ವಿಭಾಗ, ಬೆಂಗಳೂರು.

ಪಿ.ಆರ್. 1645

## ಇಂಧನ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಇಎನ್ 159 ಇಇಬಿ 2005, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2005**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 30(1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್. ಗೋಕುಲ್ ರಾಂ, ಭಾ.ಆ.ಸೇ. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿರ್ದೇಶಕರುಗಳ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ಸುಧಾಕರ್ ರಾವ್, ಭಾ.ಆ.ಸೇ., ಇವರ ಜಾಗಕ್ಕೆ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1653